# ಕನ್ನಡ ವಿಶ್ವವಿದ್ಯಾಲಯ, ಹಂಪಿ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಶೋಧನಾ ಪ್ರಬಂಧ




## ಕೊಡಗಿನ ಗೌರಮ್ಮನವರ ಕತೆಗಳಲ್ಲಿ ಕುಟುಂಬದ ಪರಿಕಲ್ಪನೆ

ಸಂಶೋಧನಾ ವಿದ್ಯಾರ್ಥಿ

ಮೋಹನ್ ಎಂ.

ನೋಂದಣಿ ಸಂಖ್ಯೆ: KVMBKS-00613

ಮಾರ್ಗದರ್ಶಕರು

ಡಾ.ನರಸಿಂಹಮೂರ್ತಿ ಬಿ.ಆರ್.
ಸಹ ಪ್ರಾಧ್ಯಾಪಕರು
ಕನ್ನಡ ವಿಭಾಗ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಚಿಕ್ಕಬಳ್ಳಾಪುರ


AKSHARA GRANTHALAYA
ACC.NO. 048943

ಕಾವ್ಯಮಂಡಲ
ಬೆಂಗಳೂರು

2012–13

1134

# ದೃಢೀಕರಣ ಪತ್ರ

ಮೋಹನ್ ಎಂ. ಇವರು ***"ಕೊಡಗಿನ ಗೌರಮ್ಮನವರ ಕತೆಗಳಲ್ಲಿ ಕುಟುಂಬದ ಪರಿಕಲ್ಪನೆ"*** ಎಂಬ ಶೀರ್ಷಿಕೆಯ ಈ ಎಂ.ಫಿಲ್. ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಡಾ॥ ಬಿ. ಆರ್. ನರಸಿಂಹ ಮೂರ್ತಿ
ಎಂ.ಎ., ಎಂ.ಇಡಿ., ಪಿ.ಹೆಚ್.ಡಿ.,
ಸಹ ಪ್ರಾಧ್ಯಾಪಕರು ಹಾಗೂ ಕನ್ನಡ ವಿಭಾಗದ ಮುಖ್ಯಸ್ಥರು
ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು
ಚಿಕ್ಕಬಳ್ಳಾಪುರ.

ಮಾರ್ಗದರ್ಶಕರು

ಡಾ.ನರಸಿಂಹಮೂರ್ತಿ ಬಿ.ಆರ್.
ಸಹ ಪ್ರಾಧ್ಯಾಪಕರು
ಕನ್ನಡ ವಿಭಾಗ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಚಿಕ್ಕಬಳ್ಳಾಪುರ

ಸ್ಥಳ : ಬೆಂಗಳೂರು
ದಿನಾಂಕ : 21/07/2014

1134

## ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ***"ಕೊಡಗಿನ ಗೌರಮ್ಮನವರ ಕತೆಗಳಲ್ಲಿ ಕುಟುಂಬದ ಪರಿಕಲ್ಪನೆ"*** ಎಂಬ ಶೀರ್ಷಿಕೆಯ ಈ ಎಂ.ಫಿಲ್. ನಿಬಂಧವನ್ನು ಡಾ. ನರಸಿಂಹಮೂರ್ತಿ ಬಿ.ಆರ್. ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಿಕ್ಕಬಳ್ಳಾಪುರ, ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಇತರೆ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

*ಮೋಹನ್ ಎಂ.*

*ಸಂಶೋಧನಾ ವಿದ್ಯಾರ್ಥಿ*

ಸ್ಥಳ : ಬೆಂಗಳೂರು

ದಿನಾಂಕ :

## ಪರಿವಿಡಿ

## ಅಧ್ಯಾಯ-1

### ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ :

ಕನ್ನಡ ಸಣ್ಣಕಥೆಗೆ ಸುದೀರ್ಘವಾದ ಪರಂಪರೆಯಿದೆ. ಅದರ ಹೆಸರೇ ಸೂಚಿಸುವಂತೆ 'ಸಣ್ಣ ಕತೆ' ಯ ಪರಿಕಲ್ಪನೆಯೇ ಸಾಪೇಕ್ಷವಾದುದು. ಕಥೆ ಎಂದರೇನು ಎನ್ನುವುದು ಸ್ಪಷ್ಟವಾಗದೇ 'ಸಣ್ಣ ಕತೆ' ಯ ಸ್ವರೂಪವನ್ನು ತಿಳಿಯಲಾಗುವುದಿಲ್ಲ. ಸಮಸ್ಯೆ ಇಷ್ಟಕ್ಕೇ ಸೀಮಿತವಾಗುವುದಿಲ್ಲ. ಕಥೆ ಕೂಡ ಕಥನ ಸಾಹಿತ್ಯದ ಒಂದು ಪ್ರಕಾರವಾದುದರಿಂದ, ಅನೇಕ ಕಥೆಗಳಲ್ಲಿ ಕುಟುಂಬದ ಚಿತ್ರಣವನ್ನು ನಿರೂಪಿಸುವಲ್ಲಿ ಸಾಧ್ಯವಾಗಿದೆ. ಈಗಿದ್ದ ರೂಪದಲ್ಲಿ ಕನ್ನಡ ಸಣ್ಣಕತೆಗೆ ಪ್ರೇರಣೆ ಪಾಶ್ಚಿಮಾತ್ಯ ಸಾಹಿತ್ಯದಿಂದ ದೊರೆತಿದ್ದು, ನಿಜವಾದರೂ ಅದರ ಬೇರುಗಳು ಭಾರತೀಯ ಕಥನ ಪರಂಪರೆಯಲ್ಲಿರುವುದರಿಂದ ಸಣ್ಣಕತೆಯನ್ನು ಕುರಿತು ಪಾಶ್ಚಿಮಾತ್ಯ ಕಲ್ಪನೆಗಳು ನಮಗೆ ಪರ್ಯಾಪ್ತವಾಗಲಾರವು. ಮುಂದೆ ವಿಸ್ತಾರವಾಗುತ್ತ ಭಾರತೀಯ ಸಂಸ್ಕೃತಿಯಲ್ಲಿ ಪ್ರಾಚೀನ ಕಾಲದಿಂದಲೂ ಕಥನ ಸಾಹಿತ್ಯಕ್ಕೆ ಬೇರೆ ಯಾವ ಸಂಸ್ಕೃತಿಯಲ್ಲಿಯೂ ಕಾಣದ ಪ್ರಾಶಸ್ತ್ಯ ದೊರಕಿದೆ. ಸ್ವಾತಂತ್ರ್ಯ ಪೂರ್ವ ಕಾಲದ ಕತೆಗಳಲ್ಲಿ ಸಂಸಾರದ ಸುಖ ದುಃಖಗಳು, ಆಶೆ-ಆದರ್ಶಗಳು, ಮಾನವೀಯ ಸಂಬಂಧಗಳು ಚಿತ್ರಣವನ್ನು ಕಾಣಬಹುದಾಗಿದೆ. ಸ್ವಾತಂತ್ರ್ಯ ಪೂರ್ವದ ಮಹಿಳಾ ಕಥನ ಸಾಹಿತ್ಯವನ್ನು ಗಮನಿಸಿದಾಗ 'ಹಿಂದೂ ಧರ್ಮದಲ್ಲಿದ್ದ ಅಸ್ಪೃಶ್ಯತೆ, ಬಡತನ, ವರದಕ್ಷಿಣೆ, ಬಾಲ್ಯವಿವಾಹ, ಕೇಶಮುಂಡನ, ಲಿಂಗಪ್ರಜ್ಞೆ ಮತ್ತು ಹೆಣ್ಣು – ಗಂಡುಗಳು ಸಂಬಂಧಗಳನ್ನು ಗುರುತಿಸ ಬಹುದಾಗಿದೆ ಅಲ್ಲದೆ ಕುಟುಂಬದ ಮುಖ್ಯ ಸಮಸ್ಯೆಗಳಾದ ಅಧಿಕಾರ, ಧರ್ಮ, ಲಿಂಗರಾಜಕಾರಣ, ಮದುವೆ ಮೊದಲಾದ ಕೌಟುಂಬಿಕ ಬಿಕ್ಕಟ್ಟುಗಳು ಆ ಸಮಯದಲ್ಲಿ ಮುಖ್ಯವಾಗಿದ್ದವು.

**"ಕೊಡಗಿನ ಗೌರಮ್ಮನವರ ಕತೆಗಳಲ್ಲಿ ಕುಟುಂಬದ ಪರಿಕಲ್ಪನೆ"** :- ಈ ಅಧ್ಯಯನದಲ್ಲಿ ಸ್ವಾತಂತ್ರ್ಯ ಪೂರ್ವ ಕಾಲದ ಕುಟುಂಬದಲ್ಲಿ ಯಾವ ಸಮಸ್ಯೆಗಳನ್ನು ಕುಟುಂಬದಲ್ಲಿನ ಸದಸ್ಯರು ಎದುರಿಸುತ್ತಿದ್ದರು ಎಂಬುದನ್ನು ಮುಖ್ಯವಾಗಿ ಗುರುತಿಸುವ ಒಂದು ಪ್ರಯತ್ನ ಮಾಡಿದೆ. ಈ ಸಂದರ್ಭದಲ್ಲಿ ಜನಪ್ರಿಯ ಧಾಟಿಯನ್ನು ಬಳಸಿಕೊಂಡ ನಮ್ಮ ಲೇಖಕಿಯರಿಂದ ವಿಧವಾ ವಿವಾಹ, ಪ್ರೇಮ ವಿವಾಹ, ಶಿಕ್ಷಣದ ಅವಶ್ಯಕತೆ, ಮೌಢ್ಯ ಸಂಪ್ರದಾಯಗಳನ್ನು ಪ್ರಶ್ನಿಸುವ ಬಗೆ, ಸಾಂಸಾರಿಕ ಸುಖ ದುಃಖಕ್ಕೆ ಒತ್ತು ಕೊಟ್ಟಿರುವುದನ್ನು ಗುರುತಿಸಬಹುದು. ಪ್ರಾರಂಭದ ಕತೆಗಾರ್ತಿಯರು ತಮ್ಮ ಕತೆಗಳಲ್ಲಿ ಈ ಬಹುಮುಖ್ಯ ವಿಚಾರಗಳನ್ನು ಚರ್ಚಿಸುವುದನ್ನು ಗಮನಿಸಬಹುದಾಗಿದೆ. ನಂಜನಗೂಡು ತಿರುಮಲಾಂಬ, ಅರ್.ಕಲ್ಯಾಣಮ್ಮ, ಶ್ಯಾಮಲಾದೇವಿ ಬೆಳಗಾಂವ್‌ಕರ್, ಲೀಲಾಬಾಯಿ ಕಾಮತ್, ಬೆಳಗೆರೆ ಜಾನಕಮ್ಮ, ಸರಸ್ವತಿಬಾಯಿ, ರಾಜಿವಾಡೆ ಮೊದಲಾದ ಕಥನಗಾರ್ತಿಯರು ಪ್ರಮುಖವಾದ ಸ್ಥಾನ ಪಡೆಯುತ್ತಾರೆ. ಮುಖ್ಯವಾಗಿ ಕೊಡಗಿನ ಗೌರಮ್ಮನವರು ತಮ್ಮ ಕತೆಗಳಲ್ಲಿ ಕುಟುಂಬದ ಸಮಸ್ಯೆಗಳ ಚಿತ್ರಣವನ್ನು ವಿವಿಧ ಹಂತಗಳಲ್ಲಿ ಚಿತ್ರಿಸಿರುವುದನ್ನು ಕಾಣಬಹುದಾಗಿದೆ.

**ಅಧ್ಯಾಯ ಎರಡರಲ್ಲಿ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಕುಟುಂಬದ ಚಿತ್ರಣದ ಬಗ್ಗೆ ಚರ್ಚಿಸಲಾಗಿದೆ.**

**ಕಾವ್ಯ** : ಸಾಹಿತ್ಯವನ್ನು ಗಮನಿಸಿದಾಗ ಪ್ರತಿಯೊಂದು ಕಾವ್ಯವು ಕುಟುಂಬವನ್ನು ಒಳಗೊಂಡು ಆಧರಿಸಿ ರಚಿತವಾಗಿವೆ. ಕುಟುಂಬವಿಲ್ಲದೆ ಕಾವ್ಯವಿಲ್ಲ. ಉದಾ:ಕುವೆಂಪು ಕಾವ್ಯಗಳನ್ನು ಗಮನಿಸಬಹುದು. ಅವರ ಕಾವ್ಯಗಳಲ್ಲಿ ಸಮಾಜವೊಂದು ಕುಟುಂಬವೆಂದು ಭಾವಿಸಿಕೊಂಡು ಮಲೆನಾಡಿನ ಜೀವನ ಶೈಲಿಯನ್ನು ಕಾವ್ಯ ರೂಪದಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಕುವೆಂಪು ಅವರು ಪರಿಸರ ಸಮಾಜ ಕುಟುಂಬ ಈ ಮೂರು ಅಂಶಗಳು ಅವರ ಕಾವ್ಯದಲ್ಲಿ ಕಾಣಿಸಿಕೊಳ್ಳುತ್ತವೆ. ಗೋಪಾಲಕೃಷ್ಣ ಅಡಿಗರು, ಬೇಂದ್ರೆ ಇನ್ನು ಅನೇಕ ಲೇಖಕರು ಸಂಪ್ರದಾಯ ಮತ್ತು ಕುಟುಂಬ ಎರಡು ಅಂಶಗಳನ್ನು ಕಾವ್ಯದಲ್ಲಿ ಚಿತ್ರಿಸಿದ್ದಾರೆ, **ರಾಮಾಯಣ ಮತ್ತು ಮಹಾಭಾರತ ನಮ್ಮ ಮಹಾಕಾವ್ಯಗಳು**. ಇವುಗಳಲ್ಲಿ ಸಹ ಕುಟುಂಬದ ಮೂಲ ಚಿತ್ರಣವನ್ನು ಕಾಣಬಹುದು. ಕೌರವರು ಪಾಂಡವರು ಒಂದೇ ಕುಟುಂಬದವರಾದರೂ ಅನೇಕ ಕಾರಣಗಳಿಂದಾಗಿ ಅವರು ಎರಡು ಕುಟುಂಬಗಳಾಗಿ ವಿಂಗಡನೆಯಾದರು. ಅಲ್ಲಿ ಕಂಡುಬರುವ ಪಾತ್ರಗಳು, ದಾಯಾದಿಗಳ ಚಿತ್ರಣ, ಅಲ್ಲಿನ ಸ್ತ್ರೀಯರ ಪಾತ್ರ, ಸಂಪ್ರದಾಯಗಳು ಅನೇಕ ಆಚಾರ ವಿಚಾರಗಳು ಕುಟುಂಬವನ್ನು ಆಧರಿಸಿ ಆ ಮಹಾಕಾವ್ಯದಲ್ಲಿ ರೂಪಿತವಾಗಿವೆ.

**ನಾಟಕ** : ಕನ್ನಡ ಸಾಹಿತ್ಯದಲ್ಲಿನ ಪ್ರತಿಯೊಂದು ನಾಟಕ ಪ್ರಕಾರವನ್ನು ಗಮನಿಸಿದಾಗ ಕುಟುಂಬಾಧಾರಿತವಾಗಿ ರಚಿತವಾಗಿವೆ. ಪ್ರತಿಯೊಬ್ಬ ನಾಟಕಕಾರನು ರಚಿಸಿದ ನಾಟಕ ಶೈಲಿಯನ್ನು

ಗಮನಿಸಿದಾಗ ಅವು ಕುಟುಂಬವನ್ನು ಬಿಟ್ಟು ಬೇರೆ ಯಾವುದೇ ಅಂಶವು ಅಲ್ಲಿ ಹೆಚ್ಚಾಗಿ ಕಾಣಿಸುವುದಿಲ್ಲ. ಆ ರೀತಿ ನಿರ್ಮಾಣವಾದ ನಾಟಕಗಳು ರಂಗಮಂಟಪದ ಮೇಲೆ ನಿರೂಪಿತವಾದಾಗ ಪ್ರೇಕ್ಷಕರು ಅದನ್ನು ನೋಡಿದಾಗ ಅದು ಕುಟುಂಬವೆಂಬ ಚಿತ್ರಣ ಅವರ ಮನದಲ್ಲಿ ಮೂಡುತ್ತದೆ. ಒಟ್ಟಾರೆಯಾಗಿ ಹೇಳುವುದಾದರೆ ಕುಟುಂಬವೇ ನಾಟಕ. ಉದಾ:ಕೈಲಾಸಂ ಅವರ ನಾಟಕಗಳು, ಕುವೆಂಪು ಅವರ ನಾಟಕಗಳು ಗಮನಿಸಬಹುದು.

**ಕಾದಂಬರಿ** : ಕಾದಂಬರಿಗಳು ಕುಟುಂಬದಲ್ಲಿನ ವಾಸ್ತವ ಚಿತ್ರಣವನ್ನು ಚಿತ್ರಿಸಿವೆ. ಕುಟುಂಬದಲ್ಲಿ ಆಂತರಿಕ ಒಳಜಗಳಗಳು ಮತ್ತು ಅಲ್ಲಿ ರಾಜಕೀಯ ಅಲ್ಲಿನ ಸಂಪ್ರದಾಯಗಳು-ಎಲ್ಲವನ್ನು ಕಾದಂಬರಿಗಳು ವಾಸ್ತವ ಸನ್ನಿವೇಶಕ್ಕೆ ಕಟ್ಟಿಕೊಡುವ ವಿಧಾನವನ್ನು ಒಳಗೊಂಡಿವೆ. ಉದಾ: ಶಿವರಾಮ ಕಾರಂತರ ಬೆಟ್ಟದ ಜೀವ, ಕಾದಂಬರಿಗಳು, ಕುವೆಂಪುರವರ ಮಳೆಗಳಲ್ಲಿ ಮದುಮಗಳು, ಕಾನೂರು ಸುಬ್ಬಮ್ಮ ಹೆಗ್ಗಡತಿ ಕಾದಂಬರಿಗಳು, ಬೈರಪ್ಪನವರ ಪರ್ವ, ವಂಶವೃಕ್ಷ ಕಾದಂಬರಿಗಳನ್ನು ಗಮನಿಸಬಹುದು.

**ಕೊಡಗಿನ ಗೌರಮ್ಮನವರ ಜನನ ಹಾಗೂ ಬಾಲ್ಯ ಜೀವನ :**

ಕೊಡಗಿನ ಗೌರಮ್ಮನವರ ಕಾಲ 1912 ರಿಂದ 1936. ರಾಮಯ್ಯ ಮತ್ತು ನಂಜಕ್ಕ ಇವರ ಮಗಳಾಗಿ 05-03-1913 ರಲ್ಲಿ ಕೊಡಗಿನಲ್ಲಿ ಜನಿಸಿದ ಗೌರಮ್ಮನವರು ಕೊಡಗಿನ ಕಾನ್ವೆಂಟ್ ಶಾಲೆಯಲ್ಲಿ ಪ್ರೌಢಶಾಲೆಯವರೆಗೆ ವಿದ್ಯಾಭ್ಯಾಸ ಮಾಡಿರುತ್ತಾರೆ. ಗೌರಮ್ಮನವರ ಪೂರ್ವಜರು ಮೂಲತಃ ವಿಟ್ಲ ಸೀಮೆಯವರಾಗಿದ್ದು, ಕ್ರಮೇಣ ಕುಕ್ಕೆ ಸುಬ್ರಹ್ಮಣ್ಯ ಭಾಗದಿಂದ ಘಟ್ಟದ ಮೇಲೇರಿ ಮಲೆನಾಡು ಪ್ರದೇಶವಾದ ಕೊಡಗಿನಲ್ಲಿ ಬಂದು ನೆಲೆಸಿದ ಹವ್ಯಕ ಬ್ರಾಹ್ಮಣ ಸಂಪ್ರದಾಯದವರು.

**ಗೌರಮ್ಮನವರ ಕಥಾ ಸಾಹಿತ್ಯ** : ಇವರ ಕೃತಿಗಳು 1936 'ಕಂಬನಿ' ಕಥಾಸಂಕಲನವು 12 ಕಥೆಗಳನ್ನೊಳಗೊಂಡಿದ್ದು, ಅನಂತರದ 'ಚಿಗುರು' 1942 ಕಥಾಸಂಕಲನ 8 ಕಥೆಗಳನ್ನು ಹೊಂದಿದ್ದು ಮರಣೋತ್ತರವಾಗಿ ಪ್ರಕಟವಾಗಿದೆ.

ಗೌರಮ್ಮನವರ ಕತೆಗಳನ್ನು ಗಮನಿಸಿದಾಗ ಅವರ ಪ್ರತಿಯೊಂದು ಕತೆಗಳಲ್ಲಿ ಕುಟುಂಬದಲ್ಲಿ ಸಂಬಂಧಗಳು ಯಾವ ರೀತಿಯಲ್ಲಿ ವಿಸ್ತಾರ ಹೊಂದುತ್ತ ಮತ್ತು ಕತೆ ಮುಂದಿನ ಹಂತವನ್ನು ತಲುಪಲು ಯಾವ ರೀತಿಯಲ್ಲಿ ವಿಸ್ತಾರಗೊಂಡು ಹೋಗುತ್ತದೆ ಎಂಬುದು ಈ ಒಂದು ಪ್ರಬಂಧದ ಮುಖ್ಯ ಉದ್ದೇಶವಾಗಿದೆ. ಕುಟುಂಬದ ಪ್ರತಿಯೊಂದು ಸಂಬಂಧಗಳನ್ನು ಗೌರಮ್ಮ, ಸಂಪ್ರದಾಯಸ್ಥ ಹೆಣ್ಣು ಮಗಳೊಬ್ಬಳು ಯಾವ ರೀತಿಯಲ್ಲಿ ನೋಡುತ್ತಾರೆ ಎಂಬುದು ತಿಳಿಸಲಾಗುತ್ತದೆ.

ಗೌರಮ್ಮನ ಕತೆಗಳಲ್ಲಿ ಲಿಂಗಪ್ರಜ್ಞೆ ಮತ್ತು ಹೆಣ್ಣು-ಗಂಡು ಸಂಬಂಧಗಳು ಕುಟುಂಬದಲ್ಲಿ ಸಾಮಾನ್ಯವಾಗಿ ಸಮಾನ ರೀತಿಯಲ್ಲಿ ಸಂಬಂಧವನ್ನು ಹೊಂದಿರುತ್ತವೆ. ಈ ವಿಷಯವಂತೂ ಬಹುಮುಖ್ಯ ಆಯಾಮವಾಗಿದೆ. ಪ್ರಪಂಚದ ಚರಿತ್ರೆಗಳಲ್ಲಿ ಪುರುಷ ವ್ಯವಸ್ಥೆಯು ಸ್ತ್ರೀ ಲೈಂಗಿಕತೆಯನ್ನು ಹತೋಟಿಯಲ್ಲಿಡಲು ಪ್ರಯತ್ನಿಸಿದ್ದನ್ನು ಉದ್ದಕ್ಕೂ ಗಮನಿಸುತ್ತೇವೆ. ಕುಟುಂಬದಲ್ಲಿ ಸ್ತ್ರೀ ಲೈಂಗಿಕತೆಯ ವಿಷಯವು ಸ್ತ್ರೀ ಪುರುಷ ಸಂಬಂಧದ ಮೂಲದಲ್ಲಿದ್ದ ಗ್ರಾಮೀಣ ಪ್ರದೇಶಗಳಲ್ಲಿ ಲಿಂಗ ಪ್ರಜ್ಞೆ ಸ್ವಲ್ಪ ಪ್ರಮಾಣದಲ್ಲಿ ಕಡಿಮೆ ಕಾಣುತ್ತೆ. ಗೌರಮ್ಮನ ಕತೆಗಳಲ್ಲಿನ ಈ ಸಂಪ್ರದಾಯ ಪ್ರಜ್ಞೆಯನ್ನು ಗಮನಿಸಬಹುದು.

ಗೌರಮ್ಮನ ಕತೆಗಳಲ್ಲಿನ ಕುಟುಂಬದೊಳಗಿನ ರಾಜಕೀಯ ಅಧಿಕಾರವನ್ನು ಗಮನಿಸಿದಾಗ, ಅಧೀನ ಸ್ಥಾನದಲ್ಲಿ ಸ್ತ್ರೀ ಇದ್ದಾಗ ಅವಳ ಮೇಲೆ ಪುರುಷ ಅಧಿಕಾರ ಚಲಾಯಿಸುತ್ತದೆ. ಕುಟುಂಬದೊಳಗಿನ ಈ ರಾಜಕಾರಣವನ್ನು ನಾವು ಕೌಟುಂಬಿಕ ರಾಜಕಾರಣ ಎಂದು ಕರೆಯಬಹುದು. ವಿಧವೆಗಿಂತ ಕುಟುಂಬದಲ್ಲಿ ಅಧಿಕಾರ ಗಂಡ ಇರುವ ಹೆಣ್ಣಿಗೆ ಹೆಚ್ಚಿಗೆ ಇರುವುದು ಕಂಡುಬರುತ್ತದೆ. **ಯಾರೊಂದಿಗೆ ಮದುವೆ ಸಂಬಂಧ ಬೆಳೆಸಬೇಕು ಎಂಬುದವರಿಗೆ ಈ ರಾಜಕಾರಣ ಕೆಲಸ ಮಾಡುತ್ತದೆ.**

ಗೌರಮ್ಮನವರು ಸಂಪ್ರದಾಯ ಹೆಣ್ಣು ಮಗಳು ಮತ್ತು ಬ್ರಾಹ್ಮಣ ಕುಟುಂಬದಲ್ಲಿ ಜೀವನವನ್ನು ಕಟ್ಟಿಕೊಂಡಿರುವ ಹೆಣ್ಣು ಇವರು ಕತೆಯಲ್ಲಿನ ಧರ್ಮವನ್ನು ನಿರೂಪಿಸುವುದು ಗಮನಕ್ಕೆ ಬರುತ್ತೆ. ಕುಟುಂಬಗಳಲ್ಲಿ ಆರಂಭವಾಗುವುದು ಮೊದಲು ಧರ್ಮ ನಂತರ ಆಚಾರ ವಿಚಾರ, ಮತ್ತೆ ಹಬ್ಬ ಪೂಜೆ, ದೇವರ ನಂಬಿಕೆಗಳಿಂದ ಆರಂಭವಾಗುತ್ತದೆ. ಇವು ಮುಂದಿನ ಹಂತದಲ್ಲಿ ವಿಸ್ತಾರಗೊಂಡು ಹೋಗುತ್ತವೆ.

ಗಿರಿಜನ ಪ್ರದೇಶದಲ್ಲಿ ಹುಟ್ಟಿ ತುಂಬಿದ ಆತ್ಮೀಯ ಬದುಕಿಗಾಗಿ ನಿರಂತರವಾಗಿ ಹಾರೈಸಿದ ಅಸಲೀ ಸ್ತ್ರೀಚೇತನ ಬಗೆಯ ಆರೋಗ್ಯಕರ ಚಿಂತನೆಯ ದಾರಿಯಲ್ಲಿ ಹೊಸ ಹೆಜ್ಜೆಗಳನ್ನು ಸ್ಪಷ್ಟವಾಗಿ ಇಡುತ್ತಿದ್ದ ಕತೆಗಾರ್ತಿ ಗೌರಮ್ಮ 13-04-1939 ರಂದು ತಾವು ವಾಸವಾಗಿದ್ದ ಮನೆಗೆ ಕೇವಲ ಮೂರು ಮೈಲಿಗಳ ಅಂತರದಲ್ಲಿ ಹರಿಯುತ್ತಿದ್ದ ಹಟ್ಟಿ ಹೊಳೆಯಲ್ಲಿ ಈಜಾಡಲು ಹೋಗಿದ್ದಾಗ ಸುಳಿಯಲ್ಲಿ ಸಿಕ್ಕಿ ಕೂಡಲೇ ಮೇಲೇಳಲು ಸಾಧ್ಯವಾಗದೆ ಪ್ರಾಣ ಬಿಟ್ಟರು.

ಗೌರಮ್ಮನವರ ಕತೆಗಳನ್ನು ಗಮನಿಸಿದಾಗ ಅವರ ಕತೆಗಳಲ್ಲಿ ಹೆಣ್ಣು ಮತ್ತು ಗಂಡುಗಳ ನಡುವಿನ ಸಂಬಂಧವನ್ನು, ಇನ್ನೂ ಪಿತೃ ಪ್ರಧಾನ ವ್ಯವಸ್ಥೆಯ ವಿಚಾರ, ಧರ್ಮ, ಜಾತಿ , ಹಣ, ಅಧಿಕಾರ ಮುಂತಾದ ಸಂಗತಿಗಳೊಂದಿಗೆ, ಇಂದು ಮಾಡಿಕೊಳ್ಳುವ ಕರಾಳ ಒಡಂಬಡಿಕೆಗಳು ಗಾಬರಿ ಹುಟ್ಟಿಸುತ್ತವೆ. ವಿಚಿತ್ರವೆಂದರೆ ಪಿತೃ **ವ್ಯವಸ್ಥೆಯ ಶೋಕಭೂಮಿಯ ಒಳಗೆ ಹೇಗೋ ಬಿಲಗಳನ್ನು ಕೊರೆದುಕೊಂಡು ಸ್ತ್ರೀ ಸಂವೇದನೆ ಬದುಕಿಬಿಡುತ್ತದೆ.** ಕಲೆ, ಸಾಹಿತ್ಯ ಮೂಲಕ ತನ್ನನ್ನು ಕೆಲವೊಮ್ಮೆ ಅಭಿವ್ಯಕ್ತ ಮಾಡಿಕೊಳ್ಳುತ್ತದೆ. ಪಿತೃ ವ್ಯವಸ್ಥೆಯೊಳಗಿನ ಸ್ತ್ರೀಯರ ಸಂಬಂಧ ತುಂಬ ಸಂಕೀರ್ಣವಾದುದು. ಶೋಷಕ ಮತ್ತು ಶೋಷಿತ ಸಮೀಕರಣದಿಂದ ಅದನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಿಲ್ಲ. ಕೆಲವೊಮ್ಮೆ ನಿರ್ದಿಷ್ಟ ಸನ್ನಿವೇಶದಲ್ಲಿ ಸ್ತ್ರೀ ಶೋಷಿತವಾಗುವ ಸಂದರ್ಭವೂ ಇದೆ. (ಅತ್ತೆ – ಸೊಸೆ, ಒಡತಿ – ಕೆಲಸದಾಕೆ) ಈ ಸೂಕ್ಷ್ಮವನ್ನು ಗಮನಿಸಲಾಗಿದೆ.

ಈ ನಿಬಂಧನೆಯಲ್ಲಿ ಮನುಷ್ಯ ಎಂಬ ಹೆಸರಿನಲ್ಲಿ ಗಂಡು – ಹೆಣ್ಣು ಇಬ್ಬರನ್ನೂ ಸೇರಿಸಿ ಮಾತನಾಡುವುದು ಒಪ್ಪುವುದಿಲ್ಲ. ಹಾಗೆಯೇ ಕಾಲ, ದೇಶ, ಜನಾಂಗ ದೃಷ್ಟಿಕೋನ ಬದಲಾದಂತೆ ಸ್ತ್ರೀಯ ಕಲ್ಪನೆಯು ಬದಲಾಗುವುದರಿಂದ ಪುರುಷ ಪ್ರಧಾನ ಚಿಂತನೆಯಲ್ಲಿ ಗಂಡು ಕೇಂದ್ರ ಸ್ಥಾನದಲ್ಲಿರುವುದರಿಂದ ಹೆಂಗಸರು ಅವನ ಸುತ್ತ ಗಿರಕಿ ಹೊಡೆಯುತ್ತಾ ಗಂಡಿಗಾಗಿ ಸ್ಪರ್ಧಿಸುವಂತೆ ತೋರಿಸಲಾಗುತ್ತಿದೆ. ಅಲ್ಲದೆ ಗಂಡನ ಪ್ರಪಂಚದಲ್ಲಿ ಬದುಕುವ ಹೆಣ್ಣು ಅವನ ಮೌಲ್ಯಗಳನ್ನು ಅಂತರಂಗೀಕರಿಸಿಕೊಂಡಿರುವುದರಿಂದ ವಾಸ್ತವದಲ್ಲಿ ಈ ಚಿಂತನಾ ನೆಲೆ ರೂಪ ಪಡೆಯುತ್ತದೆ.

ಅಂದಿನ ಸಮಾಜದ ಪರಂಪರಾಗತ ನಂಬಿಕೆ ಹಾಗೂ ಹೇರಿಕೆಗಳನ್ನು ಮೀರಿ ನಿಂತು ಹೆಣ್ಣಿನ ಬದುಕಿನಲ್ಲಿ ಸವಾಲಾದ ವಿಧವಾ ಸಮಸ್ಯೆ, ವರದಕ್ಷಿಣೆ, ಬಾಲ್ಯವಿವಾಹ, ವಿಷಮದಾಂಪತ್ಯ, ಮುಂತಾದ ಅಂಶಗಳು ಗೌರಮ್ಮನ ಕಥೆಗಳಲ್ಲಿ ಪರಂಪರೆಯಲ್ಲಿ ಮತ್ತು ಆಧುನಿಕ ಕತೆಗಳಲ್ಲಿ ನಡೆಯುವ ಈ ಸಮಸ್ಯೆಗಳಿಗೆ ಆಗಿನ ಗೌರಮ್ಮನವರ ಕತೆ ಸಾಕ್ಷಿಯಾಗಿದೆ.

ಗೌರಮ್ಮನವರು ಬರೆದ ಕತೆಗಳಲ್ಲಿ ಮುಖ್ಯವಾದುದು **'ಕಂಬನಿ'** ಕಥಾಸಂಕಲನ. 'ಕಂಬನಿ' ಸಂಕಲನದಲ್ಲಿ ಹನ್ನೆರಡು ಕತೆಗಳಿವೆ. **ವಾಣಿಯ ಸಮಸ್ಯೆ, ಸನ್ಯಾಸಿ ರತ್ನ – ಒಂದು ಪುಟ್ಟ ಚಿತ್ರ, ಕೌಸಲ್ಯಾನಂದನ** ನಾಲ್ಕು ಘಟನೆಗಳು, **ಪ್ರಾಯಶ್ಚಿತ್ತ, ಅಪರಾಧಿ ಯಾರು, 'ಹೋಗಿಯೇ ಬಿಟ್ಟಿದ್ದಿ,' ಸುಳ್ಳು ಸ್ವಪ್ನ, ಯಾರು?** – ಈ ಕತೆಗಳಲ್ಲಿ ಮನು ವಿವರಣೆ, **ವೈಧಿಕ ಧರ್ಮದ ಕಪಿಮುಷ್ಠಿಯಲ್ಲಿ**

ಬಳಲುವ ಧಾರ್ಮಿಕ ನಂಬಿಕೆಗಳಿಂದ ಸುಖರಹಿತ **ಬದುಕಲ್ಲಿ ಜೀವಶ್ಚವದಂತೆ ಕಾಣಬರುವ ಮಹಿಳೆಯರ ಪಾತ್ರಗಳು ಇವೆ.**

**ಚಿಗುರು** ಕಥಾ ಸಂಕಲನದಲ್ಲಿ **'ಪುನರ್ ವಿವಾಹ'** ಕತೆಯೂ ಒಂದು. ಇದರ ಹೆಸರೇ ಸೂಚಿಸುವಂತೆ ಮರುಮದುವೆಯನ್ನು ಕುರಿತ ಕತೆ. ಇನ್ನೊಂದು ಕಥೆಯಾದ **'ಆಹುತಿ'** ಕತೆಯಲ್ಲಿ ಬಡತನ, ಮಹತ್ವಾಕಾಂಕ್ಷೆ, ಆದರ್ಶ, ಡಿಗ್ರಿಗಳು ಹೇಗೆ ಬದುಕನ್ನು ಸುತ್ತುವರಿದು, ಮನುಷ್ಯನನ್ನು ಮಾರಾಟ ಮಾಡುತ್ತವೆ, ಎನ್ನುವ ಚಿತ್ರಣ ಇಲ್ಲಿ ನೈಜವಾಗಿ ಮೂಡಿದೆ. **'ಅದೃಷ್ಟದ ಆಟ', 'ನನ್ನ ಮದುವೆ' ಕತೆಗಳಲ್ಲಿ ಮನುಷ್ಯನ ನಡುವಿನ ಪ್ರೀತಿ, ಪ್ರೇಮ ಸಮಾಜದ ಕಪಿಮುಷ್ಠಿಯಲ್ಲಿ** ಸಿಲುಕಿದ ಗಂಡು – ಹೆಣ್ಣುಗಳ ಭಾವನೆಗಳ ಅಸಹಾಯಕತೆಗಳನ್ನು ಪ್ರತಿಧ್ವನಿಸುತ್ತದೆ. **'ಕೆಲವು ಕಾಗದಗಳು'** ಕತೆಯಲ್ಲಿ ಕತೆಗಾರ್ತಿ ಗಂಡು –ಹೆಣ್ಣಿನಲ್ಲಿ ಕಾಮಮೂಲವಾದ ಆಕರ್ಷಣೆಯೊಂದೇ ಇರಬೇಕೆಂದಿಲ್ಲ. ಇರುವುದಿಲ್ಲವೆಂಬುದು ಹೆಜ್ಜೆ ಹೆಜ್ಜೆಗೆ ಕುತೂಹಲ ಕೆರಳಿಸುತ್ತಾ ಸಾಗುವ ಹಾಸ್ಯಭರಿತ ಕತೆ **"ಮರದ ಬೊಂಬೆ', 'ಚುನ್ನದಿನ ಚಿಗುರು'**– ಸಂಕಲನದ ಕೊನೆಯ ಕತೆಗಳ ಹಾಗೂ ಇವುಗಳಲ್ಲಿ ಲೇಖಕಿ ಸಾಯುವ ಹಿಂದಿನ ದಿನ ಬರೆದದ್ದು. ಇದು ಅಪೂರ್ಣವಾಗಿದ್ದರೂ, ಕಥನ ಕೌಶಲಕ್ಕೆ ಕುಂದು ಬಂದಿಲ್ಲ. **ಪಾಪನ ಮದುವೆ, ಕಾಡಿನ ಕಥೆ,** ಇವು ಮೂರು ಅವರ ಪರಿಪಕ್ವ ಕಥಾ ಕೌಶಲ್ಯದ ಕುರುಹುಗಳಾಗಿ ಉಳಿಯಬಲ್ಲವು.

**'ಚಿಗುರು'** ಕಥಾ ಸಂಕಲನಕ್ಕೆ ಮುನ್ನುಡಿ ಬರೆದಿರುವ ಬೇಂದ್ರೆಯವರ ಮಾತುಗಳು ಇಂತಿವೆ:– "ಚಿಗುರಿನೊಳಗಿನ ಕತೆಯ ಎಲ್ಲ ವಸ್ತು ಚಿರಂತನವಾದವುಗಳು ಅವು ಗಂಡು ಹೆಣ್ಣಿನೊಳಗಿನ ಪರಸ್ಪರ ಆಕರ್ಷಣೆ, ಒಲವು, ದಾಂಪತ್ಯ, ದುರಂತ, ಸುಖ–ದುಃಖ ಎಂಬ ವಿಚಾರಗಳು, ತಂಗಿ ಗೌರಮ್ಮನವರ ಹೆಣ್ಣು ಹೃದಯ ಈ ವಸ್ತುವನ್ನೇ ಮುಗ್ಧ ಅಪೇಕ್ಷೆಯಿಂದ ಪ್ರೌಢ ವಿವೇಕದಿಂದ ಸುಧಾರಕ ದೃಷ್ಟಿಯಿಂದ ಅವರಿಗೆ ಸಹಜವಾಗಿ ಬೆಳೆಯಲಿರುವ ಸಮಾನ ತೂಕದಿಂದ ನೀತಿಯ ಗರ್ಭದಲ್ಲಿಯೂ ರೂಪಕಗೊಳಿಸುವ ಜಾಣ್ಮೆಯಿಂದ ಈ ವಿವಿಧ ಕತೆಗಳಲ್ಲಿ ವಿಸ್ತರಿಸಿದೆ.

ಗೌರಮ್ಮನ ಕತೆಗಳಲ್ಲಿ ಸ್ತ್ರೀಯರ ಅಸಹಾಯಕತೆಯನ್ನು ಕಂಡು ಅದರ ಪರಿಹಾರಕ್ಕಾಗಿ ತಡಕಾಡಿದ ಬೌದ್ಧಿಕ ಕುರುಹುಗಳಿವೆ. ರೂಢಿಮೂಲದಿಂದ ಬಂದ ಸಾಮಾಜಿಕ ಸಂಪ್ರದಾಯವನ್ನು ಪ್ರಶ್ನಿಸುವ ಸುಧಾರಕ ಬುದ್ಧಿಯಿದೆ. "ಗೌರಮ್ಮನವರು ಮೊದಲಗಿತ್ತಿಯರಾಗಿ ಬರೆದ ಕತೆಗಳ ಸನ್ನಿವೇಶಗಳಲ್ಲಿ ಹೃದಯದ ಅಂತಃಕರಣ ಸರಳವೂ, ಸೂಕ್ಷ್ಮವೂ ಆಗಿ ಬಂದಿದೆ. ಉದಾತ್ತ ಜೀವನ

ದೃಷ್ಠಿ ಅವರ ಬರವಣಿಗೆಗೆ ಸ್ಥಾಯಿಯಾಗಿದೆ ಎನ್ನಬಹುದು. ಅವರ ಕತೆಗಳು ಎತ್ತುವ ಸಮಸ್ಯೆ ಹಾಗೂ ಪ್ರಶ್ನೆಗಳು ಅಂದಿನ ಕಾಲಕ್ಕೆ ತೀರಾ ಹೊಸದೆನಿಸಿದ್ದವು. ಅಲ್ಲಿ ಬಹು ಘೋಷಣೆಯಾಗಲಿ – ವಿಚಾರಗಳ ಹೊರೆಯಾಗಲಿ ಕಾಣಬರುವುದಿಲ್ಲ. ಸಮಸ್ಯೆ ಒಳನೋಟ, ನೇರ ಹಾಗೂ ಸರಳ ಅಭಿವ್ಯಕ್ತಿ ತಂತ್ರಗಳು ಕಥೆಯ ಕಲಾತ್ಮಕತೆಗೆ ಹೆಚ್ಚಿನ ಭಂಗ ತರುವಂತಿಲ್ಲ. ಹೆಣ್ಣಿನ ಬಾಳಿನ ಆಪ್ತ ನಿರೂಪಣೆ ಮೊದಲಿಗೆಂಬಂತೆ ಇವರ ಕಥೆಗಳಲ್ಲಿ ಒಡಮೂಡಿದೆ. ಹೀಗೆ ಪತ್ರ ವರದಿ, ಡೈರಿ ಮೊದಲಾದ ಮಾದರಿಗಳ ಮೂಲಕ ಕತೆ ಹೇಳಲೆತ್ನಿಸಿದ ಗೌರಮ್ಮ, ಕನ್ನಡ ಸಣ್ಣಕತೆಯ ಆರಂಭಿಕ ಘಟ್ಟದಲ್ಲೇ ಒಂದು ನಿರ್ದಿಷ್ಟ ನೆಲೆಗಟ್ಟಿನಲ್ಲಿ ಹೊಸ ಪ್ರಯೋಗಗಳನ್ನು ನಡೆಸಿರುವುದು ಕಂಡುಬರುತ್ತದೆ. ಈ ಪ್ರಯತ್ನ ಮುಂದಿನ ಪೀಳಿಗೆಯ ಕತೆಗಾರರಿಗೆ ಹೊಸ ಸಾಧ್ಯತೆಗಳನ್ನು ಪರಿಚಯಿಸಿತು. ಕತೆಗಳ ವಸ್ತು ನಾವಿನ್ಯತೆ, ತಂತ್ರ ಮತ್ತು ಅಭಿವ್ಯಕ್ತಿ ವಿದಾನದಲ್ಲಿ ವೈಯಕ್ತಿಕ ಛಾಪು ಮೂಡಿಸಿದ್ದ ಗೌರಮ್ಮ ತೀರಾ ಚಿಕ್ಕ ವಯಸ್ಸಿನಲ್ಲಿಯೇ ನಿಧನರಾದದ್ದು ಕನ್ನಡ ಕಥಾ ಕ್ಷೇತ್ರಕ್ಕಾದ ಅಪಾರ ನಷ್ಟವೆಂದೇ ಭಾವಿಸಬೇಕಾಗುತ್ತದೆ.

ಕೊಡಗಿನ ಗೌರಮ್ಮನವರ ಕತೆಗಳನ್ನು ನವೋದಯ ಸನ್ನಿವೇಶದಲ್ಲಿ ಆಲೋಚನೆ ಮಾಡಿದಾಗ, ಭಾರತೀಯ ಸಂಸ್ಕೃತಿಯಲ್ಲಿ ಪ್ರಾಚೀನ ಕಾಲದಿಂದಲೂ ಕಥನ ಸಾಹಿತ್ಯಕ್ಕೆ ಬೇರೆ ಯಾವ ಸಂಸ್ಕೃತಿಯಲ್ಲಿಯೂ ಕಾಣದ ಪ್ರಾಶಸ್ತ್ಯ ದೊರೆತಿದೆ. ಸ್ವಾತಂತ್ರ್ಯಪೂರ್ವ ಕಾಲದಲ್ಲಿ ಕತೆಗಳನ್ನು ಒಳಗೊಂಡ ಅಂಶಗಳು ಸಂಸಾರದ ಸುಖ, ದುಃಖಗಳಲ್ಲಿ ಆಶೆ–ಆದರ್ಶಗಳನ್ನು ತೊಡಗಿಸಿಕೊಂಡು ಮಾನವೀಯ ಸಂಬಂಧಗಳ ಚಿತ್ರಣದ ಮೂಲಕ ಅವುಗಳನ್ನು ಮುಂದಿನ ಪೀಳಿಗೆಗೆ ತಲುಪಿಸಿ ಬಿಡುಗಡೆ ಪಡೆಯುವುದು, ಸ್ವಾತಂತ್ರ್ಯ ಪೂರ್ವದ ಮಹಿಳಾ ಕಥನ ಸಾಹಿತ್ಯವನ್ನು ಗಮನಿಸಿದಾಗ ಹಿಂದೂ ಧರ್ಮದಲ್ಲಿದ್ದ ಅಸ್ಪೃಶ್ಯತೆ, ಬಡತನ, ವರದಕ್ಷಿಣೆ, ಬಾಲ್ಯವಿವಾಹ, ಕೇಶಮುಂಡನ, ಲಿಂಗ ಪ್ರಜ್ಞೆ ಮತ್ತು ಹೆಣ್ಣು–ಗಂಡು ಸಂಬಂಧಗಳು ಕುಟುಂಬದ ಸಮಸ್ಯೆ, ಅಧಿಕಾರ, ಧರ್ಮ, ಜಾತಿ, ಆ ಸಮಯದಲ್ಲಿ ಮುಖ್ಯವಾಗಿದ್ದವು ಎಂಬುದನ್ನು ಅವರ ಕಥಾ ಪ್ರಪಂಚ ಮೂಲಕ ಗುರುತಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

ಪ್ರಸ್ತುತ ಈ ಅಧ್ಯಯನದಲ್ಲಿ ಕೊಡಗಿನ ಗೌರಮ್ಮನವರ ಕಥಾ ಸಾಹಿತ್ಯದಲ್ಲಿ ಪರಂಪರೆ ಮತ್ತು ಆಧುನಿಕತೆಗಳ ನಡುವಿನ ಬಿಕ್ಕಟ್ಟು ಹೇಗೆ ಆಗಿದೆ? ಇವರ ಸಾಹಿತ್ಯವು ಸಂಪ್ರದಾಯ ಮತ್ತು ಆಧುನಿಕತೆ ಈ ಎರಡು ನೆಲೆಗಳನ್ನು ಅವರ ಕಥಾ ಸಾಹಿತ್ಯಯಿಂದ ನೋಡಲು ಸಾಧ್ಯವಿದೆಯೇ

ಎಂಬ ಚರ್ಚೆಯನ್ನು ಎತ್ತಿಕೊಂಡು ಉತ್ತರ ಕಂಡುಕೊಳ್ಳುವ ಪ್ರಯತ್ನವೊಂದನ್ನು ಇಲ್ಲಿ ಕಾಣಬಹುದಾಗಿದೆ.

ಕೊಡಗಿನ ಗೌರಮ್ಮನವರ ಕಥಾ ಸಂಕಲನಗಳು ವೈವಿಧ್ಯಮಯ ವಸ್ತುಗಳನ್ನು ಹೊಂದಿವೆ. ಅದರಲ್ಲಿ ಬರುವ ಜಾತಿ ಪದ್ಧತಿ, ಅನುಸಂಧಾನಗಳು, ಗಂಡು-ಹೆಣ್ಣಿನ ಸಂಬಂಧ, ಪರಂಪರೆ-ಆಧುನಿಕತೆಗಳ ಬಿಕ್ಕಟ್ಟು, ಹಿಂದೂ ಮುಸ್ಲಿಂ ಬಾಂಧವ್ಯ ಮತ್ತು ಅದೇ ಸಂದರ್ಭದಲ್ಲಿ ಅವುಗಳ ಹಿಂದಿರುವ ಒತ್ತಡಗಳು ಮತ್ತು ವೈರುಧ್ಯಗಳನ್ನು ಅನಿವಾರ್ಯವಾಗಿ ಚರ್ಚಿಸಲಾಗುವುದು. ಸಮಾಜ, ಸಂಸ್ಕೃತಿಯ ಚೌಕಟ್ಟಿನಲ್ಲಿ ಕಂಡುಬರುವ ವಿಪರ್ಯಾಸಗಳನ್ನು ವಿಶ್ಲೇಷಿಸುವುದನ್ನು ಇಲ್ಲಿ ಕಾಣಬಹುದು. ಈ ಅಧ್ಯಯನದಲ್ಲಿ ಜಾತಿ ಪದ್ಧತಿಯನ್ನು ವಿಶ್ಲೇಷಿಸುವಾಗ ಸಮಾಜದಲ್ಲಿ ಅದರಿಂದ ಉಂಟಾಗುತ್ತಿರುವ ಶೋಷಣೆ ಹಾಗೂ ಅದರ ವಿರುದ್ಧ ವ್ಯಕ್ತಿಗಾಗುತ್ತಿರುವ ಪ್ರತಿಭಟನೆಯನ್ನು ಕತೆಗಳ ನಿದರ್ಶನಗಳೊಂದಿಗೆ ಗುರುತಿಸಲಾಗುವುದು. ಗಂಡು-ಹೆಣ್ಣು ಸಂಬಂಧಗಳ ಚಿತ್ರಣದಲ್ಲಿ ಗಂಡ-ಹೆಂಡತಿ ಸಂಬಂಧವು ಸಮಾಜದಲ್ಲಿ ಹೇಗೆ ಭಿನ್ನ ನೆಲೆಯಲ್ಲಿ ವ್ಯಕ್ತವಾಗಿದೆ ಎಂಬುದನ್ನು ವಿಶ್ಲೇಷಿಸಲಾಗಿದೆ.

"ಕುಟುಂಬದ ಪರಿಕಲ್ಪನೆ" ಎಂಬ ಅಧ್ಯಾಯದಲ್ಲಿ ಪರಂಪರೆಯಲ್ಲಿದ್ದ ನಂಬಿಕೆ, ಪದ್ಧತಿಗಳು, ಆಧುನಿಕ ಕಾಲದಲ್ಲಿ ಹೇಗೆ ಬದಲಾಗುತ್ತದೆ ಎಂಬುದರ ಜೊತೆಜೊತೆಗೆ ವರ್ತಮಾನದಲ್ಲಿ ನಡೆಯುತ್ತಿರುವ ಅನ್ಯಾಯವನ್ನು, ಶೋಷಣೆಗಳನ್ನು ನಿದರ್ಶನಗಳ ಮೂಲಕ ಗುರುತಿಸುವ ಪ್ರಯತ್ನವನ್ನು ಕಾಣಬಹುದಾಗಿದೆ.

ಪುರುಷ ಕತೆಗಾರರು ಬರೆಯುವ ಬರವಣಿಗೆಯ ಸಿದ್ಧಮಾದರಿ ಬಳಸಿಕೊಂಡ ಗೌರಮ್ಮನವರು ಕುಟುಂಬ ಸದಸ್ಯರ ಸಮಸ್ಯೆಗಳು ಮತ್ತು ಕುಟುಂಬದಲ್ಲಿ ವಿವಾಹ ವಿಧಾನವು ಮತ್ತು ಸಂಪ್ರದಾಯ ಪದ್ಧತಿಗಳನ್ನು ಪ್ರಶ್ನಿಸುವ ಬಗೆ, ಸಾಂಸಾರಿಕ ಸುಖ, ದುಃಖಕ್ಕೆ ಒತ್ತು ಕೊಟ್ಟು ಜನಪ್ರಿಯ ಕತೆಗಳ ಮೇಲೆಯೇ ಹರಿದು ಬಂದಿತು. ಹಲವು ನೆಲೆಗಳಲ್ಲಿ ಅದರ ಕತೆಗಳನ್ನು ನೋಡಬಹುದಾಗಿದೆ. ಬದುಕನ್ನು ನೋಡುವ ದೃಷ್ಟಿಕೋನ, ಸಹಾನುಭೂತಿಯ ಮನಸ್ಸು ಮತ್ತು ಅವರ ಭಾಷಾ ಶೈಲಿಯನ್ನು ಅವರ ಸಹಜವಾದ ಕಥನ ಗುಣ, ಹಾಗೆಯೇ ಆಧುನಿಕತೆಯ ಪ್ರತಿಸ್ಪಂದನೆ, ಪ್ರತಿಭಟನೆಯನ್ನು ಗುರುತಿಸಬಹುದಾಗಿದೆ. ವ್ಯವಸ್ಥೆಯ ಹಲವು ಮುಖಗಳ ದಾಖಲಾತಿಯಂತಿರುವ

ಈ ಕತೆಗಳನ್ನು ಅಧ್ಯಯನ ಮಾಡುವ ಮೂಲಕ ಅಲ್ಲಿನ ವಿಶಿಷ್ಟತೆಯನ್ನು ಗುರುತಿಸುವ ಅಗತ್ಯ ಬಹಳ ಅವಶ್ಯಕವಾದುದಾಗಿರುತ್ತದೆ.

**ಕುಟುಂಬವನ್ನು** ಆಧರಿಸಿ ರಚಿಸಿದ ಕತೆಗಳ ಅಧ್ಯಯನದ ಉದ್ದೇಶ, ವ್ಯಾಪ್ತಿ, ಚರ್ಚೆ ಮೊದಲಾದವುಗಳು ಹೇಗೆ ಮೂಡಿಬಂದಿವೆ ಎಂಬುದರ ಬಗ್ಗೆ ವಿವರವಾಗಿ ಅಧ್ಯಯನ ಮಾಡಿ ವಿಮರ್ಶಿಸುವ ಮುಖ್ಯ ಉದ್ದೇಶವನ್ನು ಇಲ್ಲಿ ಕಾಣಬಹುದು. ಹಾಗೆಯೇ ಸಣ್ಣಕತೆಗಳಲ್ಲಿ ಕುಟುಂಬ, ಕುಟುಂಬದ ರಚನೆ, ಸಂಬಂಧಗಳು, ಕುಟುಂಬ ರಾಜಕೀಯ, ಅಧಿಕಾರ ಮತ್ತು ಹಕ್ಕುಗಳು, ಲಿಂಗತಾರತಮ್ಯ, ಧರ್ಮ, ಸಂಸ್ಕೃತಿ ಮತ್ತು ಕುಟುಂಬ ಸದಸ್ಯರ ನಡುವಿನ ವೈಮನಸ್ಸು ಮೊದಲಾದವುಗಳು ಯಾವ ರೀತಿ ಕತೆಗಳಲ್ಲಿ ಮೂಡಿಬಂದಿದೆ ಎಂಬುದನ್ನು ಸಹ ಇಲ್ಲಿ ತಿಳಿಯಬಹುದಾಗಿದೆ. ಮತ್ತು ಈ ಹಿನ್ನೆಲೆಯಲ್ಲಿ ಕತೆಗಳಲ್ಲಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಪದ್ಧತಿಗಳನ್ನು ಗುರುತಿಸಿ ಅಧ್ಯಯನಕ್ಕೆ ಒಳಪಡಿಸಬೇಕೆಂದಿದ್ದೇನೆ.

**'ಅಧ್ಯಾಯ ನಾಲ್ಕರಲ್ಲಿ'** ಗೌರಮ್ಮನವರ ಕತೆಗಳಲ್ಲಿ ಹೆಣ್ಣು-ಗಂಡು ಸಂಬಂಧಗಳು ಕುಟುಂಬದ ವಿಷಯದಲ್ಲಿ ಬಹುಮುಖ್ಯ ಆಯಾಮವಾಗಿದೆ. ಕುಟುಂಬದೊಳಗಿನ ರಾಜಕೀಯ ಅಧಿಕಾರವನ್ನು ಗಮನಿಸಿದಾಗ ಅಧೀನ ಸ್ಥಾನದಲ್ಲಿ ಸ್ತ್ರೀ ಇದ್ದಾಗ ಅವಳ ಮೇಲೆ ಪುರುಷ ಅಧಿಕಾರ ಚಲಾಯಿಸುತ್ತದೆ. ಕುಟುಂಬದೊಳಗಿನ ಈ ರಾಜಕಾರಣವನ್ನು ನಾವು ಕೌಟುಂಬಿಕ ರಾಜಕಾರಣ ಎಂದು ಕರೆಯಬಹುದು. ಮನೆಯಲ್ಲಿ ವಿಧವೆಗಿಂತ ಕುಟುಂಬದಲ್ಲಿ ಅಧಿಕಾರ ಗಂಡ ಇರುವ ಹೆಣ್ಣಿಗೆ ಹೆಚ್ಚಿಗೆ ಇರುವುದು ಕಂಡುಬರುತತದೆ. ಯಾರೊಂದಿಗೆ ಮದುವೆ ಸಂಬಂಧ ಬೆಳೆಸಬೇಕು ಎಂಬಲ್ಲಿಯವರೆಗೆ ಈ ರಾಜಕಾರಣ ಕೆಲಸ ಮಾಡುತ್ತದೆ ಎಂಬುದನ್ನು ಕತೆಗಳಲ್ಲಿ ಕಂಡುಕೊಳ್ಳುವ ಪ್ರಯತ್ನ ನನ್ನದಾಗಿದೆ.

ಗೌರಮ್ಮನವರು ಸಂಪ್ರದಾಯ ಹೆಣ್ಣು ಮಗಳು ಮತ್ತು ಬ್ರಾಹ್ಮಣ ಕುಟುಂಬದಲ್ಲಿ ಜೀವನವನ್ನು ಕಟ್ಟಿಕೊಂಡಿರುವ ಹೆಣ್ಣು ಇವರ ಕತೆಯಲ್ಲಿಯ ಧರ್ಮವನ್ನು ನಿರೂಪಿಸುವುದು ಗಮನಕ್ಕೆ ಬರುತತದೆ. ಕುಟುಂಬಗಳಲ್ಲಿ ಆರಂಭವಾಗುವುದು ಮೊದಲು ಧರ್ಮ ನಂತರ ಆಚಾರ-ವಿಚಾರ ಮತೆ ಹಬ್ಬ, ಪೂಜೆ, ದೇವರ ನಂಬಿಕೆಗಳಿಂದ ಆರಂಭವಾಗುತ್ತವೆ ಹಾಗೂ ಕುಟುಂಬದ ಆಚರಣೆಗಳನ್ನು ವಿಶ್ಲೇಷಿಸಲಾಗುತ್ತದೆ. ಇವರ ಸಾಹಿತ್ಯ ಮುಖ್ಯ ಕಾಳಜಿಯೆಂದರೆ ಇರುವ ಸಮಾಜವನ್ನು ಇರುವ ರೀತಿಯಲ್ಲಿ ತಿಳಿಸುತ್ತಾ ವಿಮರ್ಶೆಗೆ ಒಳಪಡಿಸುವುದು. ಒಟ್ಟಾರೆಯಾಗಿ ಅವರ ಕಥಾ ಸಾಹಿತ್ಯದ

ಕುಟುಂಬದ ಕಲ್ಪನೆ ಮತ್ತು ಗಂಡು ಹೆಣ್ಣಿನ ಸಂಬಂಧಗಳು ಮತ್ತು ಪರಂಪರೆ ಮತ್ತು ಆಧುನಿಕತೆಯ ನಡುವಿನ ಬಿಕ್ಕಟ್ಟು ಅಂಶಗಳ ಹುಡುಕಾಟವೇ ಈ ಪ್ರಬಂಧ ಮೂಲ ಉದ್ದೇಶವಾಗಿದೆ.

**ಅಧ್ಯಾಯ ಐದರಲ್ಲಿ** ಕೊಡಗಿನ ಗೌರಮ್ಮನವರ ಕತೆಗಳಲ್ಲಿ 'ಜೀವನ' ಎಂಬುದು ಒಂದು ರೂಪಕವಾಗಿ ಕಾಣಿಸುತ್ತದೆ. ಪ್ರತಿಯೊಂದು ಕತೆಯ ಜೀವಾಳ 'ಜೀವನ'ಕ್ಕೆ ಆಧಾರ ಸಂಸ್ಥೆಯಾದ ಕುಟುಂಬವೇ ಆಗಿ, ಸೂಕ್ಷ್ಮ ಒಳನೋಟಗಳನ್ನು ತಿಳಿಯ ಹೇಳುತ್ತದೆ. ಕುಟುಂಬದರ ಅಂತರಾಳವನ್ನು ನೋಡಬೇಕಾದರೆ ಕೊಡಗಿನ ಗೌರಮ್ಮನವರ ಕತೆಗಳನ್ನು ಓದಲೇ ಬೇಕು ಎಂಬ ತೀರ್ಮಾನಕ್ಕೆ ಬರಲೇಬೇಕಾಗುತ್ತದೆ. ಕುಟುಂಬದ ಪ್ರತಿಯೊಬ್ಬ ಸದಸ್ಯನ ಅಮಿತೋತ್ಸಾಹ ಅಡಗಿರುವುದು ಆ ಕುಟುಂಬದ ವ್ಯಾಪ್ತಿಯಲ್ಲಿ ಬರುತ್ತದೆ. ಉತ್ಸಾಹ ಎಲ್ಲಾರೊಂದಿಗೆ ಹಂಚಿಕೊಂಡಾಗ ಅಭಿವ್ಯಕ್ತವಾಗುವ ಸಂತಸ ಹೇಳತೀರದು.

ಕುಟುಂಬದಲ್ಲಿ ವ್ಯಕ್ತವಾಗುವ ಸಮನ್ವಯ ಸಂಸ್ಕೃತಿಯನ್ನು ವಾಣಿಯ ಸಮಸ್ಯೆ, ಮಗುವಿನ ರಾಣಿ, ಪುನರ್ ವಿವಾಹ, ಅದೃಷ್ಟ ಆಟ, ನನ್ನ ಮದುವೆ, ಆಹುತಿ ಮುಂತಾದ ಕತೆಗಳು ಪ್ರತಿಪಾದಿಸುತ್ತವೆ. ಜೀವನದ ಮೌಲ್ಯಗಳನ್ನು ಎತ್ತಿ ಹಿಡಿಯುತ್ತವೆ. ಹೀಗಾಗಿ ಕೊಡಗಿನ ಗೌರಮ್ಮನವರ ಕತೆಗಳು ಓದುಗನಿಗೆ ಜೀವನ ಮೌಲ್ಯವನ್ನು ಕಲಿಸಿಕೊಡುತ್ತವೆ.

**ಅಧ್ಯಾಯ ಆರರಲ್ಲಿ** ಪ್ರಸ್ತುತ ಅಧ್ಯಯನ ಸಾಮಾರೋಪವನ್ನು ನೀಡಲಾಗಿದೆ.

# ಅಧ್ಯಾಯ–2

**ಕನ್ನಡ ಸಾಹಿತ್ಯದ ಪ್ರಮುಖ ಪ್ರಕಾರಗಳಲ್ಲಿ ಕುಟುಂಬದ ಚಿತ್ರಣ :**

ಕುಟುಂಬವೆಂಬುದು ನಮ್ಮ ಭಾರತೀಯ ಪರಂಪರೆಯಲ್ಲಿ ಒಂದು ಸುಂದರವಾದ ವ್ಯವಸ್ಥೆ ಎಂದು ಕರೆಯಬಹುದು. ಕುಟುಂಬ ಎಂಬುದು ನಮ್ಮ ಪರಂಪರೆಗೆ ಒಂದು ಆಧಾರ ಸ್ತಂಭ ಎಂದು ಕರೆಯಬಹುದು. 'ಕುಟುಂಬ ವ್ಯವಸ್ಥೆಯಲ್ಲಿ ತಾಯಿ ಮಹತ್ತರವಾದ ಪಾತ್ರ ವಹಿಸುತ್ತಾಳೆ. ಕುಟುಂಬ ವ್ಯವಸ್ಥೆ ಮತ್ತು ತಾಯ್ತನ ಜೊತೆಜೊತೆಯಾಗಿಯೇ ಬರುತ್ತವೆ'[1] ನೂರಾರು ದೌರ್ಜನ್ಯಗಳನ್ನು ಕುಟುಂಬ ವ್ಯವಸ್ಥೆ ಹೊಂದಿದ್ದರೂ ತಾಯಿ ಮಾತನಾಡದೆ, ಮೌನವಾಗಿ ಸಹಿಸಿ ತನ್ನ ನಡವಳಿಕೆಯ ಮೂಲಕವೇ ಪರಿವರ್ತಿಸುತ್ತಾಳೆ. ಇಂದಿಗೂ ಕುಟುಂಬ ಜೀವಂತವಾಗಿದ್ದರೆ ಅದಕ್ಕೆ ತಾಯ್ತನವೇ ಮೂಲ ಕಾರಣ. ಒಬ್ಬ ಹೆಣ್ಣು ತನ್ನ ತಾಯ್ತನದ ವ್ಯಕ್ತಿತ್ವದ ಮೂಲಕ ತನ್ನ ಕುಟುಂಬ ಮಾತ್ರವಲ್ಲದೇ ಇಡೀ ಸಮುದಾಯವನ್ನೇ ಅವಲೋಕಿಸುವ ದಿಕ್ಕಿನಲ್ಲಿ ಯೋಚಿಸುತ್ತಾಳೆ. ಕೊಡಗಿನ ಗೌರಮ್ಮನವರ ಕತೆಗಳಲ್ಲಿ ಭಿನ್ನ ಭಿನ್ನ ಪಾತ್ರಗಳ ಮೂಲ ವ್ಯಕ್ತಪಡಿಸಿರುವ ಈ ಕುಟುಂಬ ಪರಿಕಲ್ಪನೆಯನ್ನು ಆಕೆ ಕುಟುಂಬದ ತಾಯಿ ಮಾತ್ರವಾಗದೆ, ಸಮುದಾಯದ, ಸಮಾಜದ ತಾಯಿಯಾಗಿಯೂ ಕೆಲಸ ಮಾಡಿದ್ದಾಳೆ.

ಪ್ರತಿಯೊಂದು ಸಾಹಿತ್ಯದ ಪ್ರಕಾರದಲ್ಲಿ ವಸ್ತು ಎನ್ನುವುದು ಮುಖ್ಯ. ಅದು ಕಾವ್ಯವಾಗಲೀ, ನಾಟಕವಾಗಲೀ, ಕಾದಂಬರಿಯಾಗಿರಲಿ, ಅವುಗಳ ವಸ್ತು ತಂತ್ರವನ್ನು ಅವುಗಳು ಹೊಂದಿರುತ್ತವೆ. ಸಾಹಿತ್ಯ ಅನ್ನುವಂತಹದ್ದು ಕಾಲ್ಪನಿಕವಾದದ್ದು. ಅಂದರೆ ಈ ಲೋಕದಿಂದ ಹೊರತಂದಲ್ಲಿ ಈ ಲೋಕ ಸಂಗತಿಗಳು, ಘಟನೆಗಳು ಕಾರ್ಯಕಾರಣಗಳು ಲೇಖಕರಿಗೆ ಮೂಲವಸ್ತುಗಳಾಗಿದ್ದರೂ ಅವುಗಳನ್ನು ತನ್ನೊಳಗಿನ ಭಾಗ ಜಗತ್ತಿನಲ್ಲಿ ಕರಗಿಸಿಕೊಂಡು ತನ್ನ 'ಸೃಜಲಶೀಲ ಕ್ರಿಯೆ ಪ್ರಕ್ರಿಯೆಗಳಿಂದ ವಿಭಿನ್ನ ಸ್ವರೂಪದಲ್ಲಿ ಭಾಷಾ ಮಾಧ್ಯಮದ ಮೂಲಕ ಅಭಿವ್ಯಕ್ತಿಸಿ ಪುನರ್ ಸೃಷ್ಠಿಸುತ್ತಾನೆ'[2] ಈ ಪ್ರಕ್ರಿಯೆಯ ಸೃಜನಾತ್ಮಕ ಕ್ರಿಯೆಯು ಈ ಪ್ರಕಾರಗಳಲ್ಲಿ ಕಾಣಿಸಿಕೊಳ್ಳುತ್ತೇವೆ.

ಅದರ ಚೆಲುವಿನಲ್ಲಿ ಬೆರಗು, ಅದರ ಜೀವನ ರೀತಿಯಲ್ಲಿ ಕುತೂಹಲ, ಊಹೆ, ಮನುಷ್ಯ-ಮನುಷ್ಯರ ಸಂಬಂಧ ಇದಕ್ಕೆ ಮುಖ್ಯವಾಗಿ ಕಾಣುತ್ತವೆ. ಇದರಿಂದ ಸಮಾಜದಲ್ಲಿ ಮನುಷ್ಯ ಕುಟುಂಬದಲ್ಲಿ ಮನುಷ್ಯ, ಸ್ನೇಹ, ಪ್ರೇಮ, ದ್ವೇಷ ಇವೆಲ್ಲ ಇವುಗಳಿಗೆ ವಸ್ತುವಾಗುತ್ತವೆ. ಸಾಹಿತ್ಯ ವಸ್ತುವಿನ ಪರಧಿ ಈ ಕಾಲದಲ್ಲಿ ಹಿಗ್ಗಿದಂತಾಯಿತು. "ಬರಹಗಾರ ಜೀವನಕ್ಕೆ ತನ್ನ ವೈಯಕ್ತಿಕ ಪ್ರತಿಕ್ರಿಯೆಯನ್ನು ಸೂಚಿಸಿಬಯಸುತ್ತಾನೆ, ಧಾರ್ಮಿಕ ವಿವರಣೆ ಅಥವಾ ನೀತಿಬೋಧನೆಗಾಗಿ ಕವಿ ಬರೆಯು ಅದರ ಚೆಲುವಿನಲ್ಲಿ ಬೆರಗು, ಅದರ ಜೀವನ ರೀತಿಯಲ್ಲಿ ಕುತೂಹಲ, ಊಹೆ, ಮನುಷ್ಯ-ಮನುಷ್ಯರ ಸಂಬಂಧ ಇದಕ್ಕೆ ಮುಖ್ಯವಾಗಿ ಕಾಣುತ್ತವೆ. ಇದರಿಂದ ಸಮಾಜದಲ್ಲಿ ಮನುಷ್ಯ ಕುಟುಂಬದಲ್ಲಿ ಮನುಷ್ಯ, ಸ್ನೇಹ, ಪ್ರೇಮ, ದ್ವೇಷ ಇವೆಲ್ಲ ಇವುಗಳಿಗೆ ವಸ್ತುವಾಗುತ್ತವೆ. ಸಾಹಿತ್ಯ ವಸ್ತುವಿನ ಪರಧಿ ಈ ಕಾಲದಲ್ಲಿ ಹಿಗ್ಗಿದಂತಾಯಿತು. "ಬರಹಗಾರ ಜೀವನಕ್ಕೆ ತನ್ನ ವೈಯಕ್ತಿಕ ಪ್ರತಿಕ್ರಿಯೆಯನ್ನು ಸೂಚಿಸಿಬಯಸುತ್ತಾನೆ, ಧಾರ್ಮಿಕ ವಿವರಣೆ ಅಥವಾ ನೀತಿಬೋಧನೆಗಾಗಿ ಕವಿ ಬರೆಯುವುದಿಲ್ಲ"[೩] ತನ್ನ ವೈಯಕ್ತಿಕ, ಕಾಲ್ಪನಿಕ ಅನುಭವವನ್ನು, ಜೀವನದಲ್ಲಿ ತನ್ನ ಕಲ್ಪನೆ ಕಂಡ ವಿನ್ಯಾಸವನ್ನು, ಜೀವನಕ್ಕೆ ತನ್ನ ಹೃದಯ ಸ್ಪಂದಿಸಿದ ರೀತಿಯನ್ನು ಭಾಷೆಯಲ್ಲಿ ಮೈಗೂಡಿಸಲು ಉದ್ದೇಶಿಸುತ್ತಾನೆ. ಆದುದರಿಂದ ವಿವಿಧ ಸಾಹಿತ್ಯ ಪ್ರಕಾರಗಳು ಅವನಿಗೆ ಅಗತ್ಯವಾಗುತ್ತವೆ. ಕಾವ್ಯ-ಕಾದಂಬರಿ- ಸಣ್ಣ ಕತೆ- ನಾಟಕ ಎಂದು ಆರಿಸಿಕೊಂಡಾಗಲೇ ಅದರಲ್ಲಿ ಯಾವುದಕ್ಕೆ ಯಾವ ವಸ್ತುವನ್ನು ಆಯ್ಕೆ ಮಾಡಿಕೊಳ್ಳಬೇಕು ಎಂಬುದು ಒಂದು ಮಹತ್ವವಾದ ಪ್ರಯತ್ನ. ನಮ್ಮ ಬರಹಗಾರರಿಗೆ ಸಾಹಿತ್ಯ ರಚನೆಯಲ್ಲಿ ಕುಟುಂಬವು ಒಂದು ವಸ್ತುವೆಂದು ಪರಿಗಣಿಸಿ ಸಾಹಿತ್ಯ ರಚನೆಯಲ್ಲಿ ತೊಡಗಿಸಿದ್ದಾರೆ. ಕಾವ್ಯ, ಕಾದಂಬರಿ, ನಾಟಕ ಪ್ರಕಾರಗಳಲ್ಲಿ ಕುಟುಂಬದ ವಸ್ತುವನ್ನು ಗುರುತಿಸಬಹುದು.

### 1. ಕಾವ್ಯದಲ್ಲಿ ಕುಟುಂಬ:

"ಹೊಸಗನ್ನಡದಲ್ಲಿ (ನವೋದಯ) ಬಹು ಸಮೃದ್ಧವಾಗಿ ಬೆಳೆದು ಬಂದಿದ್ದು, ಮೊದಲು ಕಾವ್ಯದ ಕ್ಷೇತ್ರದಲ್ಲಿ ಮತ್ತು ಸಣ್ಣ ಕತೆಗಳ ಕ್ಷೇತ್ರದಲ್ಲಿ. "ಹಿಂದೆ ಕನ್ನಡದಲ್ಲಿ ಬಹುಮಟ್ಟಿಗೆ ರಚಿತವಾದದ್ದು ಕಥನ ಕಾವ್ಯ, ಆದಿಕವಿ ಪಂಪ ಮಹಾಭಾರತದ ಕತೆಯನ್ನು ಆದಿನಾಥನ ಕತೆಯನ್ನು ಬಿತ್ತರಿಸಿದ"[೪] ಅಂದಿನಿಂದ ಕನ್ನಡ ಕವಿಗಳು ರಾಮಾಯಣ, ಮಹಾಭಾರತಗಳ ಕತೆಯನ್ನು ಸಮಗ್ರವಾಗಿಯೋ, ಭಾಗವಾಗಿಯೋ ಹೇಳಿದ್ದಾರೆ; ಈಶ್ವರ, ಗಿರಿಜೆಯರ ಕತೆಯನ್ನು ಹೇಳಿದ್ದಾರೆ.

ಮೇಲೆ ಹೇಳಿರುವ ಮಾತನ್ನು ಗಮನಿಸಿದಾಗ ಕಾವ್ಯದ ವಸ್ತುಗಳು ಕಥನ ವಸ್ತುಗಳು ಒಂದೇ ರೀತಿಯಲ್ಲಿ ಆಯ್ಕೆಯಾಗಿರುತ್ತವೆ. "ಕಥನ ಕಾವ್ಯ" ಈ ಮಾತನ್ನು ಗಮನಿಸಿದಾಗ ಎರಡು ಪ್ರಕಾರಗಳು ಆಯ್ಕೆ ಒಂದೇ, ಆದರೆ ಹೇಳುವ ಪದ್ಧತಿ ಮತ್ತು ಬರವಣಿಗೆಯ ಪದ್ಧತಿ ಮತ್ತು ಅದನ್ನು ಗ್ರಹಿಸುವ ವಿಧಾನಗಳು ಬೇರೆಯಾಗುತ್ತವೆ. ಈಗ ಕಥನ ವಸ್ತುಗಳು, ಕನಸು-ಹಂಬಲ, ನಿರಾಸೆ, ಪ್ರೇಮ, ಸ್ನೇಹ-ದ್ವೇಷ, ಬೆರಗು-ಬೇಸರ, ಸಾಮಾಜಿಕ ಅಂಶಗಳು ಕಥನ ವಸ್ತುಗಳು ವಿವರಣಾ ರೂಪದಲ್ಲಿ ಕೊಂಡೊಯ್ಯುತ್ತಾರೆ. ಇವೆ ವಸ್ತುಗಳನ್ನು ಕಾವ್ಯವು ಸೌಂದರ್ಯ ರೂಪದಲ್ಲಿ ಕಟ್ಟಿಕೊಡುವ ಪ್ರಯತ್ನಿಸುವುದು ಕಾವ್ಯ ಚೌಕಟ್ಟು ರಚನೆ ಮಾಡುತ್ತಾರೆ. "ಶ್ರೀ ರಾಮಾಯಣ ದರ್ಶನಂ" ಅನ್ನು ಕುರಿತು ಕುವೆಂಪು ಹೇಳಿದ ಮಾತು ನಿಜ, "ಕಾವ್ಯ ಬೇಕಾದವರಿಗೆ ಇಲ್ಲಿ ಕಾವ್ಯ ಸಿಗುತ್ತದೆ; ಕಥೆ ಬೇಕಾದವರಿಗೆ ಕಥೆ ಸಿಗುತ್ತದೆ, ದರ್ಶನ ಬೇಕಾದವರಿಗೆ ದರ್ಶನ ಸಿಗುತ್ತದೆ" ಕಥಾ ಸಾಮಗ್ರಿಯನ್ನು ಒಂದು ದರ್ಶನದ ಪ್ರತಿಮೆಯಾಗಿ ಎಲ್ಲೆಡೆ ನಡೆಸುವ ಪ್ರತಿಭೆ ವಿಶಿಷ್ಟವಾದುದು"[5].

ಪುರಾಣ ಪುರುಷರ ಕತೆಗಳನ್ನು ಬಿತ್ತರಿಸಿದ್ದಾರೆ. ಕಾವ್ಯದಲ್ಲಿ ವ್ಯಕ್ತಿಯ ಭಾವನೆಗಳಿಗೆ ನೇರವಾದ ಅಭಿವ್ಯಕ್ತಿ ದೊರೆತಿದ್ದು, ವಚನ ಸಾಹಿತ್ಯದಲ್ಲಿ ಮತ್ತು ದಾಸ ಸಾಹಿತ್ಯದಲ್ಲಿ, ಆದರೆ ಈ ಯುಗಗಳಲ್ಲಿಯೂ ಭಾಷೆಯಲ್ಲಿ ಹೊರಹೊಮ್ಮಿದ್ದು, ಕೆಲವೇ ಭಾವಗಳು, ಭಕ್ತಿ, ದೈನ್ಯ- ಅಲೌಕಿಕ ಪ್ರೇಮ ಮತ್ತು ಸಾಮಾಜಿಕ ಹಾಗೂ ಸ್ವ-ವಿಮರ್ಶೆಯ ಹೊಳಹುಗಳು.

ಈ ಮಾತನ್ನು ಪರೀಕ್ಷಿಸಿದಾಗ ಶ್ರೀ ರಾಮಾಯಣ ದರ್ಶನಂ ಮಹಾ ಕಾವ್ಯವೆಂದು ಕರೆಯುತ್ತಾರೆ. ಆದರೆ, ಕುವೆಂಪು ಹೇಳುವ ಮಾತು ಮಹಾಕಾವ್ಯದಲ್ಲಿ "ಕಥೆ ಬೇಕಾದವರಿಗೆ ಕಥೆ ಸಿಗುತ್ತದೆ" ಎಂದು ಹೇಳಿದ್ದಾರೆ. ಇದನ್ನು ನೋಡಿದರೆ ಕಥನ ವಸ್ತುವಿಗೂ, ಕಾವ್ಯದ ವಸ್ತುವಿಗೂ ಒಂದು ರೀತಿಯ ಸಂಬಂಧವನ್ನು ಕಲ್ಪಿಸಬಹುದು.

ಕಾವ್ಯದಲ್ಲಿ ಯಾವ ವಸ್ತುವನ್ನು ಮುಖ್ಯವೆಂದು ಪರಿಗಣಿಸಿ, ಅದರ ರಚನೆಗೆ ತೊಡಗುತ್ತಾರೆ. ಹಳಗನ್ನಡ ಕಾವ್ಯಕ್ಕೆ ಪ್ರಧಾನವಾಗಿ ಪ್ರೇರಣೆ 'ಜೀವನಧರ್ಮ'. ಪಂಪ, ಪೊನ್ನ, ರನ್ನರ ಕಾವ್ಯದ ಮುಖ್ಯ ಜೀವಾಳವೇ ಇದು. ಜೀವಾಳವನ್ನು ಹೊರತುಪಡಿಸಿ ಕಾವ್ಯದ ವಸ್ತವಿಲ್ಲ. ಮಹಾಭಾರತ, ರಾಮಾಯಣ ಕಾವ್ಯಗಳಲ್ಲಿ, ಪುರಾಣಗಳಲ್ಲಿ ಜೀವನದ ಮೌಲ್ಯಗಳನ್ನು ಮುಂದಿನ ಜನಾಂಗಕ್ಕೆ ವರ್ಗಾಯಿಸುವ ಪ್ರಕ್ರಿಯೆ ಜರುಗುತ್ತದೆ. ಹಾಗಾಗಿ ಭಾರತೀಯ ಕಾವ್ಯಪರಂಪರೆ ಎಲ್ಲಾ ಕಾಲದಲ್ಲೂ

ಒಂದು ವಿಶಿಷ್ಟ ಪ್ರಭಾವವನ್ನು ಜನಗಳ ಮೇಲೆ ಬೀರುತ್ತಾ ತನ್ನ ಅಸ್ತಿತ್ವವನ್ನು ಇಂದಿಗೂ ಉಳಿಸಿಕೊಂಡು ಬಂದಿದೆ.

ಹೊಸಗನ್ನಡ ಕಾವ್ಯ ಘಟ್ಟಗಳಲ್ಲಿ ಸಾಮಾಜಿಕ ಜೀವನ ಅದರಲ್ಲೂ ಕುಟುಂಬದ ಸದಸ್ಯರು ಎದುರಿಸುವ ಸವಾಲುಗಳನ್ನು ತಮ್ಮ ಕಾವ್ಯ ವಸ್ತುಗಳಾಗಿ ಸ್ವೀಕರಿಸಿವೆ. ಅದನ್ನು ಪರಿಣಾಮಕಾರಿಯಾಗಿ ಚಿತ್ರಿಸುವ ಮನೋಭಾವ ಒಂದು ಪ್ರಮುಖ ಲಕ್ಷಣವಾಗಿ ಕಾಣಸಿಗುತ್ತದೆ. ಬೇಂದ್ರೆ, ಕುವೆಂಪು, ಪುತೀನ, ಮಾಸ್ತಿ ಮುಂತಾದ ನವೋದಯ ಕವಿಗಳಿಗೆ ಕುಟುಂಬ ವೈವಿಧ್ಯತೆಯ ಪರಿಕರವಾಗಿ ಕಾಣಿಸುತ್ತದೆ. ಕಥನ ಸಾಹಿತ್ಯದಲ್ಲಿ ಅದನ್ನು ಭಿನ್ನ ಭಿನ್ನ ನೆಲೆಗಳಲ್ಲಿ ನಿರೂಪಿಸಲು ಸಾಧ್ಯವಿದೆ. ಕುಟುಂಬದಲ್ಲಿ ನಡೆಯುವ ಎಲ್ಲ ಅಂಶಗಳು ಒಂದಲ್ಲ ಒಂದು ರೀತಿಯಲ್ಲಿ ಕಾವ್ಯದಲ್ಲಿ ರೂಪಿಸಲ್ಪಡುತ್ತದೆ.

**ಕಾದಂಬರಿಗಳಲ್ಲಿ ಕುಟುಂಬ ಚಿತ್ರಣ :**

ಕಾದಂಬರಿಗಳಲ್ಲಿ ಮೂಡಿಬಂದಿರುವ 'ಕುಟುಂಬ ಪರಿಕಲ್ಪನೆ'ಯನ್ನು ಸಂಕ್ಷಿಪ್ತವಾಗಿ ಗುರುತಿಸುವುದು ನಮ್ಮ ಅಧ್ಯಯನದಲ್ಲಿ ಗಮನಿಸಬೇಕಾದ ಒಂದು ಅಂಶವಾಗಿದೆ. ಒಂದು ಪಾತ್ರಗಳಿಗೆ ಹೊರ ಜಗತ್ತಿನಲ್ಲಿ ಏನಾಗುತ್ತದೆ, ಯಾರಿಗೆ ಗೆಲುವು, ಯಾರಿಗೆ ಸೋಲು ಎನ್ನುವುದು ಅಷ್ಟು ಮುಖ್ಯವಲ್ಲ. ಕಾದಂಬರಿಗಳಲ್ಲಿ ಜೀವನವನ್ನು ಸುತ್ತಮುತ್ತಲಿನ ಸಮಾಜವನ್ನು ಜನರನ್ನು ತನ್ನ ಅನುಭವದಲ್ಲಿ ಪುನರ್ ಸೃಷ್ಟಿಸಿಕೊಂಡ ರೀತಿಯಲ್ಲಿ ಪಾತ್ರಗಳು, ಘಟನೆಗಳ ಮೂಲಕ ನಮ್ಮ ಅನುಭವಕ್ಕೆ ತಂದುಕೊಡುತ್ತಾನೆ ಕಾದಂಬರಿಕಾರ. ಇದು ಮುಖ್ಯ ಇಲ್ಲವಾದರೆ ಕಥೆ-ಕಾದಂಬರಿಯಲ್ಲಿ ಯಾರಿಗೆ ಮದುವೆಯಾದರೆ, ಯಾರಿಗೆ ಸೆರೆಮನೆಯಾದರೆ, ಯಾರಿಗೆ ಸಾವಾದರೆ ನಮಗೇನು? ಘಟನೆ ಪಾತ್ರ ಆವರಣ, ಭಾಷೆ ಎಲ್ಲ ಕಾದಂಬರಿಕಾರನ ಜೀವನಾನುಭವವನ್ನು ಹರಳುಗಟ್ಟಿಸುವ ಪ್ರಕ್ರಿಯೆಯಲ್ಲಿ ಭಾಗಿಗಳು. "ಕಾದಂಬರಿ, ಸಣ್ಣ ಕಥೆ, ಪಾಶ್ಚಾತ್ಯ ಸಾಹಿತ್ಯದಿಂದ ನಮಗೆ ಕನ್ನಡಕ್ಕೆ ಬಂದವು ಎಂದು ಹೇಳಬಹುದಷ್ಟು ಮಟ್ಟಿಗೆ ಪ್ರಭಾವಗೊಂಡದ್ದು ಇಂಗ್ಲೀಷ್ ಸಾಹಿತ್ಯದ ಪ್ರಭಾವ."[೬]

1892ರಲ್ಲಿ ಪ್ರಕಟವಾದ ಲಕ್ಷ್ಮಣರಾವ್ ಗದಗಕರ "ಸೂರ್ಯಕಾಂತ" ಕನ್ನಡದ ಮೊದಲನೆಯ ಸ್ವತಂತ್ರ ಕಾದಂಬರಿ ಎನ್ನಬಹುದು. ಇದು ಐತಿಹಾಸಿಕ ಕಾದಂಬರಿ ಗುಚ್ಛ, ಮುರುಘಾರಾಧ್ಯರ 'ಶೃಂಗಾರ ಚಾತುರ್ಯೋಲ್ಲಾಸಿನಿ (1852), ಗಳಗನಾಥ್ 'ಪ್ರಬುದ್ಧ ನಯನ' (1858) ಇವುಗಳ ನಂತರ ಬಂದ ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ'(1986) ಕೃತಿ ನೀತಿ ಪ್ರಧಾನ

ಎಂಬುದನ್ನು ತೋರಿಸುತ್ತದೆ. ಪರಂಪರಾಗತ ನಂಬಿಕೆ, ಕಟ್ಟಳೆಗಳು, ಕಾದಂಬರಿ ಕಾಮುಕನ ಗಂಡನ ಕೈಹಿಡಿದು ವಿಧವೆಯಾಗಿ ಹಲವು ಕಷ್ಟಗಳನ್ನು ಅನುಭವಿಸಿ ಮತ್ತೆ ಮದುವೆಯಾಗಿ ಸಮಾಜದಲ್ಲಿ ಕೋಲಾಹಲವೆಬ್ಬಿಸಿದ ಇಂದಿರಾಬಾಯಿ ಈ ಕಾದಂಬರಿಗೆ ಹೆಸರು ಕೊಟ್ಟಿದ್ದಾರೆ. "ಕಾದಂಬರಿಯಲ್ಲಿ ಕುಟುಂಬ ವ್ಯವಸ್ಥೆಯನ್ನು ಒಬ್ಬ ಹೆಣ್ಣುಮಗಳು ತನ್ನ ಜೀವನದ ಆಯ್ಕೆ ವಿಷಯದಲ್ಲಿ ಸ್ವತಂತ್ರವಿಲ್ಲದ ಕಾರಣ ಈ ದುರಂತ ನಡೆಯಿತೆ"[೭] ಗೋಕಾಕರ ಕಾದಂಬರಿ 'ಸಮರಸವೇ ಜೀವನ', 'ಇಜ್ಜೋಡು' ವಿಷಮ ದಾಂಪತ್ಯದಲ್ಲಿ ಬೆಂದುಹೋದ ಸಹನೆಯ ಮೂರ್ತಿ ಪದ್ಮಾವತಿಯ ಕಥೆ, ಮುಂದಿನ ಭಾಗಗಳಲ್ಲಿ ಅವಳ ತಮ್ಮ ನರಹರಿ ಜೀವನವನ್ನು ಎದುರಿಸಿ ವಿಕಸನ ಹೊಂದುವ ಕಥೆ ಇದೆ"

ಕುಟುಂಬದ ಒಳಗೆ ನಡೆಯುವ ದುರಂತ ಜೀವನವನ್ನು ನೋಡಿದ ಅವರು ಪ್ರಮುಖ ಕಾದಂಬರಿಗಳಾದ 'ಹೃದಯಗೀತೆ', 'ಕಂಕಣ', 'ಅಪಸ್ವ' ಅಪಜಿಯ, ದೂರದಬೆಟ್ಟ, ಅವರ ಮಗಳು, ಬೆಳ್ಳಿಮೋಡ, ಹೂವುಹಣ್ಣು, ಬಾನುಬೆಳಗಿತು, ಕಾಶೀಯಾತ್ರೆ, ಶರಪಂಜರ, "ತ್ರಿವೇಣಿ ಕಾದಂಬರಿಗಳಲ್ಲಿನ ಹೆಣ್ಣು ಜಗತ್ತು ಹೆಣ್ಣಿನ ಬದುಕಿನ ದುಃಖ ದುಮ್ಮಾನಗಳನ್ನು ಪರಿಚಯಿಸುತ್ತವೆ."[೮] ಹೆಣ್ಣಿನ ಶೋಷಣೆ, ಲಿಂಗಬೇಧಗಳು ಅವಳ ಬದುಕನ್ನು ಅಕಾಲ ಮುಪ್ಪಿಗೆ ದೂಡಿರುವುದನ್ನು ಚಿತ್ರಿಸುತ್ತಾರೆ. ಕುಟುಂಬ, ವಿವಾಹ ಅವಳ ಬದುಕಿನ ಬಹುದೊಡ್ಡ ಸಮಸ್ಯೆಗಳಾಗಿರುವುದನ್ನು ಗುರುತಿಸಿದ್ದಾರೆ.

ಆ ಕುರಿತು ತಮ್ಮ ಮಿತಿಯಲ್ಲಾದರೂ ಸರಿಯಾದ ಪ್ರಶ್ನೆಗಳನ್ನೆತ್ತಿದ್ದಾರೆ. ಆದರೆ, ತಮ್ಮ ಕಾದಂಬರಿ ಪ್ರಪಂಚದಲ್ಲಿಯೇ ಅವುಗಳಿಗೆ ಪರಿಹಾರಗಳನ್ನು ಒದಗಿಸುವಲ್ಲಿ ಸೋತಿದ್ದಾರೆ. ಇಂತಹ ಸೋಲಿಗೆ ಕಾರಣಗಳನ್ನು ಬರಹಗಾರ್ತಿಯ ವೈಯಕ್ತಿಕ ನೆಲೆಯಲ್ಲಿ ಗುರುತಿಸದೆ ಸಾಮಾಜಿಕ ನೆಲೆಯಲ್ಲಿ ಗುರುತಿಸಬೇಕಾಗುತ್ತದೆ. ಅಂದಿನ ಕಾಲದ ಮಹಿಳಾ ಬದುಕಿನ ಸ್ವರೂಪದಲ್ಲಿ ತ್ರಿವೇಣಿಯವರು ಹೆಚ್ಚಿನ ಆಳಕ್ಕೆ ಇಳಿಯಲು ಸಾಧ್ಯವಾಗಿಲ್ಲ ಎನ್ನಿಸುತ್ತದೆ. ಶಿಕ್ಷಣ, ಉದ್ಯೋಗ, ಪ್ರೇಮವಿವಾಹ, ವಿವಾಹಪೂರ್ವ ಪ್ರಣಯ, ಮರುವಿವಾಹ – ಎಲ್ಲವನ್ನೂ ಕುಟುಂಬ ಆಧಾರಿತ ಕಾದಂಬರಿಗಳಲ್ಲಿ ಈ ಎಲ್ಲಾ ಅಂಶಗಳನ್ನು ತ್ರಿವೇಣಿಯವರ ಬರವಣಿಗೆಯಲ್ಲಿ ಕಾಣಿಸಿಕೊಳ್ಳುತ್ತವೆ.

**ನಾಟಕ ಸಾಹಿತ್ಯದಲ್ಲಿ ಕುಟುಂಬ ಚಿತ್ರಣ :**

ಆಧುನಿಕ ಕನ್ನಡ ನಾಟಕದ ಚರಿತ್ರೆ ಸುಮಾರು ಒಂದು ನೂರು ವರ್ಷಗಳದು. ಆದರೆ ಕಾದಂಬರಿ ಸಣ್ಣ ಕತೆಗಳಿಗೆ ಲಭ್ಯವಿಲ್ಲದ ಸಂಸ್ಕೃತ ಸಾಹಿತ್ಯದ ಪರಂಪರೆ ಈ ಸಾಹಿತ್ಯ ರೂಪಕ್ಕೆ ಲಭ್ಯವಿತ್ತು.

ನಾಟಕ ದೃಶ್ಯಕಾವ್ಯದ ಪ್ರಮುಖ ಪ್ರಕಾರ, ದಶರೂಪಗಳಲ್ಲಿ ಒಂದು, ಐದರಿಂದ ಹತ್ತರವರೆಗೆ ಅಂಕಗಳಿರುತ್ತವೆ, ಕಥಾವಸ್ತು ಪ್ರಖ್ಯಾತವಾದದ್ದು, ನಾಯಕ–ಧೀರ–ಉದಾತ್ತ, ವೀರ ಅಥವಾ ಶೃಂಗಾರ ಪ್ರಧಾನ ರಸವಾಗುತ್ತದೆ. ಅವಕ್ಕೆ ಪೋಷಕವಾಗಿ ಮಿಕ್ಕ ರಸಗಳು, ಕೆಲವು ನಾಟಗಳು ಅದ್ಭುತದಲ್ಲಿ ಕೊನೆಯಾಗುವುದೂ ಉಂಟು"[೯] ನಮ್ಮ ಪ್ರಮುಖ **ನಾಟಕಕಾರರು, ಕಂಬಾರರೂ, ಕಾರ್ನಾಡರು, ಕುವೆಂಪು, ಶ್ರೀರಂಗ, ಡಿವಿಜಿ, ಕೈಲಾಸಂ, ಶ್ರೀರಂಗ** ಅವರ ನಾಟಕ ವಸ್ತು ನೋಡಿದಾಗ ಮೇಲೆ **ಹೇಳುವ ಅನೇಕ ಅಂಶಗಳು ನಾಟಕ ವಸ್ತುವಾಗಿ ಕಾಣಿಸಿಕೊಳ್ಳುತ್ತವೆ** ಮತ್ತು ಈ ಎಲ್ಲ ನಾಟಕಕಾರರು, ನಾಟಕ ವಸ್ತುವಿಗೆ ಸಾಮಾನ್ಯವಾಗಿ ಪೌರಾಣಿಕ ಸಾಮಾಗ್ರಿಯನ್ನು ಬಳಸಿಕೊಂಡಿದ್ದಾರೆ. ಪೌರಾಣಿಕ ಅನ್ನುವುದು ನಮ್ಮ ಭಾರತೀಯ ಕುಟುಂಬದ ವಸ್ತುವಾಗಿತ್ತು. ಆ ಹಿನ್ನೆಲೆಯಲ್ಲಿ ನೋಡಿದಾಗ ನಾಟಕದ ಸಾಹಿತ್ಯ ಕುಟುಂಬದ ವ್ಯವಸ್ಥೆಯನ್ನು ಅವರು ನಾಟಕದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಕಟ್ಟಿಕೊಂಡಿದ್ದಾರೆ. ಉದಾ: ಕೈಲಾಸಂ ಅವರ **"ಬಂಡ್ವಾಳಿಲ್ಲದ ಬಡಾಯಿ"** ಅಥವಾ **"ಹುತ್ತದಲ್ಲಿ ಹುತ್ತ"** ಕೌಟುಂಬಿಕ ನಾಟಕ, **'ಟೊಳ್ಳುಗಟ್ಟಿ'ಯಲ್ಲಿ** ಇತ್ಯಾದಿ ಸಂಸಾರದ ಕಷ್ಟ ಸುಖಗಳ ಚಿತ್ರಣವೇ ಅಡಕಗೊಂಡಿದೆ. ಈ ಕುಟುಂಬ ಕಷ್ಟಗಳಿಗೆ ಸಮಾಜ ಕಾರಣವಲ್ಲ"[೧೦] ಮತ್ತು ಇಂಗ್ಲೀಷ್ ಅನುವಾದ ನಾಟಕಗಳನ್ನು ನೋಡಿದಾಗ **'ಷೇಕ್ಸ್‌ಪಿಯರ್'** ನ ನಾಟಕಗಳು ಕೆಲವು ಕುಟುಂಬ ಆಧಾರಿತ ನಾಟಕಗಳು ಕನ್ನಡಕ್ಕೆ ಅನುವಾದಗೊಂಡಿವೆ.

ಒಟ್ಟಾರೆಯಾಗಿ ನೋಡಿದಾಗ ಸಾಹಿತ್ಯ ಪ್ರಕಾರಗಳ ಕಾವ್ಯ, ನಾಟಕ, ಕಾದಂಬರಿಗಳಲ್ಲಿ ಕುಟುಂಬ ಚಿತ್ರವನ್ನು ಬರಹಗಾರರು ಕಟ್ಟಿಕೊಂಡಿದ್ದಾರೆ.

## ಕೊನೆ ಟಿಪ್ಪಣಿ:

೧) ಶಾರದಾ ಮುಳೂರ (ಸ) ಕೊಡಗಿನ ಗೌರಮ್ಮ ಮತ್ತು ತ್ರಿವೇಣಿ ಅವರ ಸಾಹಿತ್ಯ ಅವಲೋಕನ ಪುಟ– ವಿ.ವಿ. ಕರ್ನಾಟಕ ಸಾಹಿತ್ಯ ಅಕಾಡೆಮಿ – 2001

೨) ಕನ್ನಡ ಸಾಹಿತ್ಯ ಸಂಸ್ಕೃತಿ ಮಿಮಾಂಸೆ (ಸಂ) ಡಾ.ಸಿ.ಪಿ ಹೊನ್ನಯ್ಯ, ಜೈಭೀಮ್ ಪ್ರಕಾಶನ ವರ್ಷ ೨೦೦೫ ಪುಟ – ೧೬೩

೩) ಪ್ರೊ.ಎಲ್.ಎಸ್. ಶೇಷಗಿರಿ ರಾವ್: ಹೊಸಗನ್ನಡ ಸಾಹಿತ್ಯ ಚರಿತ್ರೆ ಪುಟ : 02 (03), ಪ್ರಕಾಶನ: ಸ್ವಪ್ನ ಬುಕ್ ಹೌಸ್, ವರ್ಷ: 2010

೪) ಪ್ರೊ.ಎಲ್.ಎಸ್. ಶೇಷಗಿರಿ ರಾವ್: ಹೊಸಗನ್ನಡ ಸಾಹಿತ್ಯ ಚರಿತ್ರೆ ಪುಟ : 88, ಪ್ರಕಾಶನ: ಸ್ವಪ್ನ ಬುಕ್ ಹೌಸ್, ವರ್ಷ: 2010

೫)ಪ್ರೊ.ಎಲ್.ಎಸ್. ಶೇಷಗಿರಿ ರಾವ್: ಹೊಸಗನ್ನಡ ಸಾಹಿತ್ಯ ಚರಿತ್ರೆ ಪುಟ : 110, ಪ್ರಕಾಶನ: ಸ್ವಪ್ನ ಬುಕ್ ಹೌಸ್, ವರ್ಷ: 2010

೬) ಪ್ರೊ.ಎಲ್.ಎಸ್. ಶೇಷಗಿರಿ ರಾವ್: ಹೊಸಗನ್ನಡ ಸಾಹಿತ್ಯ ಚರಿತ್ರೆ ಪುಟ : ________, ಪ್ರಕಾಶನ: ಸ್ವಪ್ನ ಬುಕ್ ಹೌಸ್, ವರ್ಷ: 2010

೭)ಪ್ರೊ.ಎಲ್.ಎಸ್. ಶೇಷಗಿರಿ ರಾವ್: ಹೊಸಗನ್ನಡ ಸಾಹಿತ್ಯ ಚರಿತ್ರೆ ಪುಟ : 31, ಪ್ರಕಾಶನ: ಸ್ವಪ್ನ ಬುಕ್ ಹೌಸ್, ವರ್ಷ: 2010

೮) ಶಾರದಾ ಮುಳೂರ (ಸ) ಕೊಡಗಿನ ಗೌರಮ್ಮ ಮತ್ತು ತ್ರಿವೇಣಿ ಅವರ ಸಾಹಿತ್ಯ ಅವಲೋಕನ ಪುಟ– 58, ವಿ.ವಿ., ಪ್ರಕಾಶನ: ಕರ್ನಾಟಕ ಸಾಹಿತ್ಯ ಅಕಾಡೆಮಿ – 2001

೯) ಓ.ಎಲ್.ನಾಗಭೂಷಣಸ್ವಾಮಿ, : ವಿಮರ್ಶೆಯ ಪರಿಭಾಷೆ : ಪುಟ:126 ಪ್ರಕಾಶನ: ಅಭಿನವ ಪ್ರಕಾಶನ – 2012

೧೦)ಪ್ರೊ.ಎಲ್.ಎಸ್. ಶೇಷಗಿರಿ ರಾವ್: ಹೊಸಗನ್ನಡ ಸಾಹಿತ್ಯ ಚರಿತ್ರೆ ಪುಟ : 31, ಪ್ರಕಾಶನ: ಸ್ವಪ್ನ ಬುಕ್ ಹೌಸ್, ವರ್ಷ: 2010

# ಅಧ್ಯಾಯ-3

**ಕೊಡಗಿನ ಗೌರಮ್ಮನವರ ಕತೆಗಳಲ್ಲಿ ಕುಟುಂಬದ ಪರಿಕಲ್ಪನೆ :**

ಮನುಷ್ಯ ಅಲೆಮಾರಿ ಬದುಕನ್ನು ಅಂತ್ಯಗೊಳಿಸಿ, ಎಂದು ಒಂದು ಕಡೆ ಸ್ಥಿರವಾಗಿ ನೆಲೆಸಲು ಆರಂಭಿಸಿದನೋ ಅಂದೇ ಸಮಾಜವೂ ತನ್ನ ಅಸ್ತಿತ್ವವನ್ನು ಪಡೆದುಕೊಳ್ಳತೊಡಗಿತ್ತು. ಸಮಾಜ ರೂಪುಗೊಳ್ಳುತ್ತಿದ್ದಂತೆ ಕುಟುಂಬಗಳು ಗಟ್ಟಿಯಾಗಿ ನೆಲೆಯೂರಿದವು. 'ಕುಟುಂಬ' ವ್ಯವಸ್ಥೆಯೊಂದು ಅತ್ಯಂತ ಸಂಕೀರ್ಣವಾದ ಸಂಸ್ಥೆ. ಕುಟುಂಬದ ಪ್ರತಿಯೊಬ್ಬ ಸದಸ್ಯ ತನ್ನ ಕರ್ತವ್ಯವನ್ನು ತಿಳಿದು ಬದುಕಿದರೆ ಆದರ್ಶ ಸಮಾಜ ರೂಪುಗೊಳ್ಳುತ್ತದೆ. ಕುಟುಂಬದ ಯೋಗ್ಯ ಸದಸ್ಯರಿಂದಾಗಿ ಸಮಾಜಕ್ಕೆ ಸ್ವಚ್ಛ ಬೆಳಕು ಬಂದಂತಾಗುವುದು. ಇಂತಹ ಸದಸ್ಯರ ಗಾಢಪ್ರಭಾವ ಮನೆ ಎಲ್ಲರನ್ನೂ ಎಚ್ಚರಿಸುತ್ತದೆ.

ಮಾನವ ಸಮಾಜಕ್ಕೆ ಕುಟುಂಬವೇ ಮೂಲಾಧಾರ. ಸಮಾಜದ ಎಲ್ಲ ಸಂಸ್ಥೆಗಳೂ ಎಲ್ಲ ಪಂಗಡಗಳೂ, ಎಲ್ಲ ವೃತ್ತಿಗಳೂ, ಎಲ್ಲ ರೀತಿ ನೀತಿಗಳೂ ಜೀವನದ ಎಲ್ಲ ಅವಸ್ಥೆಗಳೂ, ಆಶ್ರಮಗಳೂ ಸಂಬಂಧಗಳೂ ಹುಟ್ಟಿರುವುದು ಕುಟುಂಬದಿಂದ, ಸಾಮಾಜಿಕ ಸಂಸ್ಥೆಗಳಲ್ಲಿ ಕುಟುಂಬವು ಅತ್ಯಂತ ಸಣ್ಣ ಸಂಸ್ಥೆಯಾದರೂ ಅದು ಅವುಗಳಿಗೆಲ್ಲಾ ಮೂಲ ಸಂಸ್ಥೆ. ಏಕೆಂದರೆ ಇತರ ಎಲ್ಲ ಸಂಸ್ಥೆಗಳು ನಿಂತಿರುವುದು ಅದರ ಆಧಾರದ ಮೇಲೆಯೇ. ಕುಟುಂಬದ ಕಟ್ಟಡಕ್ಕೆ ಮದುವೆ ಮಹಾದ್ವಾರ, ಕುಟುಂಬದಲ್ಲಿ ಕಾಣಬರುವ ಎಲ್ಲ ಸಂಬಂಧಗಳನ್ನು ನಿರ್ದೇಶಿಸುವುದು ವಿವಾಹ ಎಂಬ ಸಾಮಾಜಿಕ ಒಪ್ಪಂದ. ಹಲವಾರು ವ್ಯಕ್ತಿಗಳನ್ನು ಒಂದು ಆರ್ಥಿಕ ನೆಲೆಯಲ್ಲಿ ನಿಲ್ಲಿಸಿ, ಅವರ ಸುತ್ತಲೂ ಸಾಮಾಜಿಕವಾದ, ಧಾರ್ಮಿಕವಾದ ಬಲೆಯನ್ನು ಹೆಣೆದು ಅವರ ಬಾಳಿಗೊಂದು ಅರ್ಥವನ್ನು, ಸಾರ್ಥಕತೆಯನ್ನು, ಸ್ವಾರಸ್ಯವನ್ನು ಒದಗಿಸಿ, ಕುಟುಂಬವನ್ನು ಸಾಮಾಜಿಕ ಸಂದರ್ಭಕ್ಕೆ ಸಂಯೋಜಿಸಿ, ಅದರ ವೈಶಿಷ್ಟ್ಯವನ್ನು ಉಳಿಸಿಕೊಡುವುದು ಮದುವೆ.

ಈ ದೃಷ್ಟಿಯಿಂದ ಕುಟುಂಬದ ಪೂರ್ವಸಿದ್ಧತೆಯೆನ್ನಬಹುದು. ಮದುವೆಯಿಲ್ಲದೆ ಬದುಕನ್ನು ಸಾಗಿಸಿಕೊಂಡು ಹೋಗುವ ಜನಾಂಗ ಈಗ ಎಲ್ಲಿಯೂ ಕಾಣಿಸುವುದಿಲ್ಲ. ಆದಿ ಮಾನವರು ಕೌಟುಂಬಿಕ ಅಗತ್ಯವನ್ನು ಪ್ರಯೋಜನವನ್ನು ಅರಿತುಕೊಳ್ಳುವ ಮೊದಲು ಮದುವೆಯಾಗುತ್ತಿರಲಿಲ್ಲವೇನೋ? ಆದರೆ ಸಮಾಜದ ಸಮುದಾಯದ ಕಲ್ಪನೆ ಮೂಡಿದೊಡನೆಯೇ ಕುಟುಂಬ ಅಗತ್ಯವನ್ನು ಮನುಷ್ಯ ಕಂಡುಕೊಂಡ. "ಕುಟುಂಬದ ವ್ಯವಸ್ಥೆಯಲ್ಲಿ ವಿವಾಹವೇ ಭೂಮಿಕೆ. ಕುಟುಂಬ ನಾಟಕಕ್ಕೆ ಇದೇ ನಾಂದಿ. ವಿವಾಹದ ವಿಧಿಗಳಲ್ಲಿ, ಪದ್ಧತಿಗಳಲ್ಲಿ ವೈವಿಧ್ಯತೆಯಿದ್ದರೂ ಅದರ ಆಶಯಗಳಲ್ಲಿ ಮತ್ತು ಇಂಗಿತಗಳಲ್ಲಿ ಏಕತಾನವಿದೆ"[11]. ವಿಶ್ವದ ಎಲ್ಲ ಧರ್ಮಗಳೂ ವಿವಾಹ ಸಂಬಂಧಗಳನ್ನು ಸುಭದ್ರಗೊಳಿಸುವ ಕಾತರತೆಯನ್ನು ಕಾಣಿಸುತ್ತವೆ.

ಪ್ರತಿಯೊಂದು ಜನಾಂಗದ ಮನೋಧರ್ಮವನ್ನು ಕುಟುಂಬಕ್ಕೆ ವಿಶಿಷ್ಟವಾದ ಕಾರ್ಯಗಳುಂಟು; ಬಾಧ್ಯತೆಗಳುಂಟು. ವಿವಾಹ ಸಂಬಂಧವು ಸಂಬಂಧದ ಬದುಕಿನ ಪ್ರಮುಖ ತಿರುವಿಗೆ ಕಾರಣವಾಗಿದೆ. ಏಕೆಂದರೆ ಸಮಾನ ಅಭಿರುಚಿ, ಪ್ರೀತಿಯುಳ್ಳ ದಂಪತಿಗಳ ಸಹಬಾಳ್ವೆಯಿಂದ ಮಾತ್ರ ವಿವಾಹದ ಮೂಲಕ ಕುಟುಂಬ ವ್ಯವಸ್ಥೆ ಪಡೆಯುತ್ತದೆ.

ವಿವಾಹವಾದಂತೆ ಪ್ರೀತಿಯೂ ಕೂಡ ಗಂಡು ಹೆಣ್ಣಿನ ಸಂಬಂಧವನ್ನು ಬೆಸೆಯುವ ಬೆಸುಗೆ, ಕೆಲವೊಮ್ಮೆ ಜಾತಿಯ ಹೆಸರಲ್ಲಿ ಪ್ರೀತಿಯ ಮುರುಟಿ ಹೋಗುತ್ತದೆ. ವಯೋ ಸಹಜ ಪ್ರೀತಿಯ ಬಲೆಯಲ್ಲಿ ಸಿಲುಕಿ ಅನಂತರ ಮನೆತನ, ಗೌರವ, ಸಂಬಂಧಗಳನ್ನು ಉಳಿಸಿಕೊಳ್ಳಲು ಪ್ರೀತಿಯನ್ನು ವಿವಾಹ ಪದ್ಧತಿಗಳನ್ನು ಬಲಿ ಕೊಡುವ ಉದಾಹರಣೆಗಳು ಸಾಕಷ್ಟಿವೆ.

ಕುಟುಂಬದ ವ್ಯವಸ್ಥೆಯ ಈ ಅಧ್ಯಾಯದಲ್ಲಿ ಪ್ರೀತಿ, ದಾಂಪತ್ಯ, ಮದುವೆಯಿಂದ ಎದುರಾಗುವ ಅನಾಹುತಗಳು, ಸಂಬಂಧಗಳ ಮೇಲೆ ಅನುಮಾನಗಳು, ಸಮಾಜದಲ್ಲಿ ವಿಧವೆಯ ಸ್ಥಾನಮಾನ, ಮರುವಿವಾಹ ಹೀಗೆ ಹಲವು ನೆಲೆಗಳಲ್ಲಿ ಬರುವ ಕುಟುಂಬಕ್ಕೆ ಸಂಬಂಧಿಸಿದ ಚಿತ್ರವನ್ನು ಕಟ್ಟಿಕೊಡಲಾಗಿದೆ.

'ವಾಣಿಯ ಸಮಸ್ಯೆ' ಗೌರಮ್ಮನವರ ಅತ್ಯುತ್ತಮ ಕತೆಗಳಲ್ಲೊಂದು. ಇಲ್ಲಿ ಬರುವ ಪಾತ್ರಗಳು 'ಬಾಲವಿಧವೆ', 'ವಾಣಿ' ಅವಳ ಪತಿ ರತ್ನ, ಡಾಕ್ಟರ್ ವೃತ್ತಿಯನ್ನು ಹೊಂದಿದ್ದನು. ಬಾಲ ವಿಧವೆಯಾಗಿದ್ದ 'ಇಂದು', ವಾಣಿ ಮತ್ತು ಆತನ ಪತಿ ರತ್ನ ಪರಿಚಯವಾದ. ನಂತರ ಆಕೆಯ ಮನಸ್ಸಿನಲ್ಲಿ, ಉಂಟಾಗುವ ತಲ್ಲಣಗಳು ಹಾಗೂ ಆ ಮೂಲಕ ಒಂದು ಸುಂದರ ಸಂಸಾರ, "ಕುಟುಂಬ ತನ್ನ ಪಾಲಿಗೆ ಇಲ್ಲದಿದ್ದರೂ ಅದನ್ನು ವಾಣಿಯ ಬದುಕಿನಲ್ಲಿ ಕಾಣುವ ದೊಡ್ಡತನವನ್ನು

ಕಾಣಬಹುದು. ಕೆರಾರಡಿನಂತರ ಬದುಕುತ್ತಿದ್ದ"[19] ಆಕೆಯ ಬದುಕು ವಾಣಿಯ ಕುಟುಂಬದಿಂದಾಗಿ ಚಿಗುರೊಡೆಯಿತು. ಕ್ರಮೇಣವಾಗಿ ತನಗೂ ರತ್ನನಂತಹ ಗಂಡನಿದ್ದರೆ? ಎಂಬ ಆಸೆ ಇಂದುವಿನಲ್ಲಿ ಮೊಳೆಯತೊಡಗುತ್ತದೆ. ಆದರೆ ಗೆಳತಿಯ ಕುಟುಂಬವನ್ನು ಉಳಿಸುವುದಕ್ಕಾಗಿ ಆಕೆ ತೆಗೆದುಕೊಂಡ ನಿರ್ಧಾರ ಕುಟುಂಬ ವ್ಯವಸ್ಥೆ ಮೇಲಿರುವ ನಂಬಿಕೆಯನ್ನೆಲ್ಲಾ ಗೌರಮ್ಮ ಅನಾವರಣಗೊಳಿಸಿದ್ದಾರೆ. ಒಂದು ಕುಟುಂಬ ಅನಾಯಾಸವಾಗಿ ಇಂದು ಛಿದ್ರಗೊಳಿಸಬಹುದಿತತು. ಆದರೆ ಅದನ್ನು ಮಾಡಲು ಮನಸ್ಸು ಬಾರದೆ ದೂರ ಸರಿಯುತ್ತಾಳೆ.

ಇಂದು-ವಾಣಿ-ರತ್ನರಲ್ಲಿ ಪರಸ್ಪರ ತಾಯ್ತನದ ಮಹಾಪೂರವೇ ಇದೆ. ಅದು ಅನೇಕ ಸಂದರ್ಭಗಳಲ್ಲಿ ವ್ಯಕ್ತವೂ ಆಗಿರುವುದನ್ನಿಲ್ಲಿ ಕಾಣಬಹುದು. ಸಾಮಾಜಿಕ ವಿಘಟನೆಗೆ ಅವಕಾಶವನ್ನೀಯದೇ 'ಇಂದು' ಎಲ್ಲರ ದೃಷ್ಟಿಯಲ್ಲಿಯೂ ಆದರ್ಶ ಹೆಣ್ಣಾಗಿ ಕಾಣುತ್ತಾಳೆ.

ನಮ್ಮ ಕುಟುಂಬ ವ್ಯವಸ್ಥೆಯ ಚರಿತ್ರೆಯನ್ನು ಗಮನಿಸಿದಾಗ, 'ವಾಣಿಯ ಸಮಸ್ಯೆ' ಕತೆಯನ್ನು ಪರಂಪರೆಯ ದೃಷ್ಟಿಕೋನದಿಂದ ನೋಡಿದಾಗ, ಕುಟುಂಬ ವ್ಯವಸ್ಥೆಯಲ್ಲಿ ಮದುವೆಯಾದ ಮೇಲೆ ನಮ್ಮ ಅಧಿಕಾರ ಭಿನ್ನ ಭಿನ್ನ ನೆಲೆಗಳಲ್ಲಿ ವಿಸ್ತಾರಕೊಂಡು ಹೋಗುತ್ತೆ. ಇಲ್ಲಿ ಇಂದುವಿನ ವಿಷಯದಲ್ಲಿ ನಡೆದಿದ್ದು 'ಇದೇ ವಿಚಾರ. ನಮ್ಮ ಕುಟುಂಬದ ಪದ್ಧತಿಗಳಿಂದ ಒಬ್ಬ ಹೆಣ್ಣು ಮಗಳ ಜೀವನದ ಅರ್ಥವಿಲ್ಲದಂತೆ ಆಯಿತು.

ಕುಟುಂಬ ವ್ಯವಸ್ಥೆಯಲ್ಲಿ ದಾಂಪತ್ಯ ಜೀವನ ಬಹಳ ಸುಂದರವಾದ ಒಂದು ಪ್ರಯಾಣ. ಗಂಡ-ಹೆಂಡತಿ ಇಬ್ಬರು ಸುಖ, ಸಂತೋಷದಿಂದ ಬಾಳಿದಾಗ ಇದು ಸಾಧ್ಯವಾಗುತ್ತದೆ. ಇಲ್ಲವಾದರೆ ಈ ವಿಷಯ ಸಾಧ್ಯವಾಗುವುದಿಲ್ಲ. ಇದಕ್ಕೆ ಉತ್ತಮ ಉದಾಹರಣೆ ಎಂದರೆ 'ವಾಣಿಯ ಸಮಸ್ಯೆ' ಕತೆ ವಾಣಿಯ ಮತ್ತ ರತ್ನ ದಾಂಪತ್ಯ ಜೀವನ ಒಂದು ಚೌಕಟ್ಟುಇಲ್ಲದ ರೀತಿಯಲ್ಲಿ ತೋರುತ್ತದೆ. 'ಅವಳದು ಜನ್ಮತಃ ಉದಾಸೀನ ಪ್ರವೃತ್ತಿ; ಯಾವ ಕೆಲಸವನ್ನಾದರೂ ನಾಳೆ ಮಾಡಿದರಾಯ್ತು ಎನ್ನುವ ಪ್ರವೃತ್ತಿ, ನಾಳೆ, ನಾಳೆ ಎಂದು ಯಾವಾಗಲೂ ಅವಳ ಕೆಲಸಗಳು ನಾಳೆಗಾಗಿ ಬಿದ್ದಿರುತ್ತಿದ್ದವು. ಅದರಿಂದ ಸಹಜವಾಗಿಯೇ ಅವಳ ಮನೆ ಅಂದಿನಷ್ಟು ಸುಂದರವಾಗಿ ತೋರಿರಲಿಲ್ಲ'[20] ಕುಟುಂಬದಲ್ಲಿ ಹೆಂಡತಿ ಕೆಲಸ ಸರಿಯಾಗಿ ನಿರ್ವಹಿಸಲು ಸಾಧ್ಯವಿಲ್ಲದಿದ್ದಾಗ ಈ ರೀತಿಯ ತಪ್ಪುಗಳು ನಡೆಯುತ್ತಿರುತ್ತವೆ ಎಂಬುದಕ್ಕೆ ಈ ಕಥೆ ಒಂದು ನಿರ್ದಶನ.

"ಈ ಕುಟುಂಬದ ಒಂದು ಪರಂಪರೆಯನ್ನು ಗಮನಿಸಿದಾಗ ಹೆಣ್ಣು ತನ್ನ ಜೀವನವನ್ನು ಯಾರ ಜೊತೆಯಲ್ಲಿ ಹಂಚಿಕೊಳ್ಳುವ ಪ್ರಯತ್ನಗಳಿಂದ ದೂರ ಸರಿಯುತ್ತಾಳೆ"[೧೪]. ಕಾರಣ ನಮ್ಮ ಕುಟುಂಬದ ಸಂಪ್ರದಾಯ, ಆಚಾರಗಳು, ವಿಚಾರಗಳು, ಸಂಬಂಧಗಳು ಎಲ್ಲವೂ ಅಡ್ಡಿಯಾಗುತ್ತವೆ.

ಇಂದು ಬಾಲ ವಿಧವೆ, ಸ್ನೇಹಿತರಿಲ್ಲದ, ನೆಂಟರಿಲ್ಲದ ಬದುಕು, ಗಂಡ ಬಿಟ್ಟುಹೋದ ಒಂಟಿ ಮನೆಯಲ್ಲಿ ನಗು ಗೊತ್ತಿರದ ಮುಖ, ಪಕ್ಕದ ಮನೆಯ ಕುಟುಂಬವೊಂದು ಬರುವವರೆಗೆ ಆಕೆಯ ಅಂತಹ ವ್ಯತ್ಯಾಸ ಇರುವುದಿಲ್ಲ. ಇಲ್ಲಿ ಬರುವ ಡಾ॥ ರತ್ನನ ಹೆಂಡತಿ ವಾಣಿ ಸೋಮಾರಿ ಮಾತ್ರವಲ್ಲ ಬೇಜವಾಬ್ದಾರಿ ಹೆಂಗಸು. ಆ ಕಾರಣವೋ ಏನೋ ವಾಣಿಯ ಗಂಡ ರತ್ನ ಮತ್ತು ವಿಧವೆ ಇಂದೂ ಪರಸ್ಪರ ಆಕರ್ಷಿತರಾಗುತ್ತಾರೆ. ನನಗೂ ಒಬ್ಬ ಗಂಡ ಇದ್ದಿದ್ದರೆ ಎಂಬ ಸಹಜ ಭಾವನೆ ಮತ್ತು ಅಲ್ಲಿವರೆಗೆ ಅನುಭವ ಇರದಂತಹ ಭಾವನೆ ಇಂದೂಗೆ ಬರತೊಡಗುತ್ತದೆ. 'ಹುಚ್ಚು ಯೋಜನೆ' ದೂರ ಮಾಡುವ ಇಂದೂನ ಮುಖದಲ್ಲಿ ಮೋಡ ಮುಚ್ಚಿದ ನಗು ಎಂದು ಗೌರಮ್ಮ ವರ್ಣಿಸುತ್ತಾರೆ. ನಮ್ಮ ಭಾರತೀಯರ ಕೆಲವು ಮೂಢನಂಬಿಕೆಗಳಿಗೆ ಅರ್ಥವಿಲ್ಲದ ಪದ್ಧತಿಗಳನ್ನು ಕೊಡಗಿನ ಗೌರಮ್ಮನವರು ವರ್ಣಿಸುತ್ತಾರೆ. "ಇಲ್ಲಿ ಕಥೆಗಾರ್ತಿ, ವಿಧವೆ ಕಥಾನಾಯಕಿಗೆ ಅನ್ಯಪುರುಷನ ಒಂದು ಪುಟ್ಟ ಭೇಟಿಯ ಅವಕಾಶವನ್ನು ನೀಡದೇ ಸಂಪ್ರದಾಯ ಸಮಾಜ ಕಟ್ಟನ್ನು ಸಂರಕ್ಷಿಸಿದ್ದಾರೇನೋ ಎಂಬ ಭಾವನೆ ಬರುವುದು ಸಹಜ"[೧೫]

ನಮ್ಮ ಸಂಪ್ರದಾಯದ ವ್ಯವಸ್ಥೆಯಲ್ಲಿ ನಮ್ಮ ರೂಢಿಗಳನ್ನು ಮೈಗೂಡಿಸಿಕೊಂಡ ಒಬ್ಬ ಬಾಲ ವಿಧವೆಯೊಬ್ಬಳು ತನಗಿಲ್ಲದ ಸುಖಕ್ಕಾಗಿ ಕೊರಗುವುದು ಇಲ್ಲಿನ ಚಿತ್ರ. ತನಗಿಲ್ಲದ ಆ ಪ್ರೀತಿ ಪ್ರೇಮದ ಸೆಳೆತದಲ್ಲಿ ಸಿಕ್ಕು ಎಲ್ಲಿ ಕೊಚ್ಚಿಕೊಂಡು ಹೋಗುತ್ತೇನೋ ಎಂದು ಹೆದರುವ 'ಇಂದು' ವಿನ ವೇದನೆ ನೋವು, ಹತಾಶೆ, ಆಂತರಿಕ ತುಮುಲಗಳು ನೈಜವಾಗಿ ಮೂಡಿಬಂದಿವೆ. "ವಾಣಿಯ ಸಮಸ್ಯೆಯಲ್ಲಿ ಕುಟುಂಬ ಗೌರವವನ್ನು ಕಾಪಾಡಿಕೊಂಡು ಬಂದ ಗೌರಮ್ಮ ಪ್ರಾಯಶ್ಚಿತ್ತ"[೧೬] ಕತೆಯಲ್ಲಿ ಕುಟುಂಬ ದೌರ್ಜನ್ಯವನ್ನು ಟೀಕಿಸುತ್ತಾ ಬಂದಿದ್ದಾರೆ.

ಕುಟುಂಬ ದೌರ್ಜನ್ಯಕ್ಕೆ ಮತ್ತೊಂದು ಉದಾಹರಣೆ : "ಪ್ರಾಯಶ್ಚಿತ್ತ ಎನ್ನುವ ಕತೆ, ಇಲ್ಲಿನ ಕತೆಯ ವಸ್ತು"[೧೭] ಮಗ ವಿದ್ಯಾರ್ಥಿ ಅವನ ಹೆಸರು ಮೂರ್ತಿ ಮತ್ತು ಮೂರ್ತಿ ತಾಯಿ ಮತ್ತು ಮೂರ್ತಿ ತಂದೆ, ಮೂರ್ತಿಯ ಪಕ್ಕದ ಮನೆಯ ನಳಿನಿ ಮೂರ್ತಿ ಪ್ರೀತಿ ಮಾಡುತ್ತಿರುವ ಹುಡುಗಿ, ತಾಯಿಗೆ ಮಗ ಪ್ರೀತಿ, ತಂದೆ ಐಶ್ವರ್ಯವಂತ, ಮಗನನ್ನು ಆರ್ಥಿಕವಾಗಿ ಖರ್ಚು ಮಾಡಿದರೆ ತಂದೆಗೆ ಕೋಪ, ಆ ಕೋಪವನ್ನು ತಾಯಿ ಮೇಲೆ ತೋರಿಸುವುದು ಹೊಡೆಯುವುದು ಮತ್ತು

ಮೂರ್ತಿ ಪ್ರೀತಿಸಿದ ಹುಡುಗಿಯನ್ನು ತಂದೆ ಬೇಡ ಎನ್ನುವುದು. ಈ ಎಲ್ಲ ಪಾತ್ರಗಳ ಕತೆಯಲ್ಲಿ ವಿಸ್ತಾರಗೊಳ್ಳುತ್ತದೆ. ಕತೆಯ ಕಡೆಯ ಸನ್ನಿವೇಶದಲ್ಲಿ ತಾಯಿ ತೀರಿಕೊಂಡು ಮಗ ತಾನು ಬಯಸಿದ ಹುಡುಗಿಯನ್ನು ಮದುವೆಯಾಗುವ ಸಂದರ್ಭಗಳು ರೂಪುಗೊಳ್ಳುತ್ತ ಕತೆಯು ಮುಗಿಯುತ್ತದೆ.

ಮೂರ್ತಿಯ ತಂದೆ ಬಹಳ ವಿಚಿತ್ರ ವ್ಯಕ್ತಿತ್ವವುಳ್ಳವನು. ಮೂರ್ತಿಯ ಮನಸ್ಸು ಎಷ್ಟು ಕೋಮಲವೋ ಅಷ್ಟೇ ಕಠಿಣ. ಆತನ ಮನಸ್ಸು ಹಣವನ್ನು ಶೇಖರಿಸುವುದಿಲ್ಲದೆ ಖರ್ಚು ಮಾಡುವುದೆಂದರೆ ಅವನಿಗೆ ಪ್ರಾಣ ಸಂಕಟ. ಮೂರ್ತಿಯ ಸೋಡಲುಗಳನ್ನು ಶೋಗಳನ್ನು ನೋಡುವಾಗ ಹಣ ಕಳೆಯುವ ದುರ್ವ್ಯಸನವೆಂದು ಕಿಡಿಕಿಡಿಯಾಗುತ್ತಿದ್ದನು. ಮಗನ ಮೇಲೆ ಕೋಪ ಬಂದಾಗ ಹೆಂಡತಿಗೆ ಹೊಡೆಯುವುದು ಅವನ ಪದ್ಧತಿ, ತಾಯಿಗೆ ಕೊಡುವ ಕ್ರೂರ ಶಿಕ್ಷೆಯನ್ನು ನೋಡಲಾರದೆ ಮೂರ್ತಿ ತಂದೆಯೊಡನೆ ಹಣ ಕೇಳುವುದನ್ನೇ ಬಿಟ್ಟು ಬಿಟ್ಟಿದ್ದನು.

ಈ ಒಂದು ಸನ್ನಿವೇಶವನ್ನು ನೋಡಿದಾಗ ಗಂಡ–ಹೆಂಡತಿ–ಮಗನ ಸಂಬಂಧಗಳು ಕುಟುಂಬ ವ್ಯವಸ್ಥೆಯಲ್ಲಿ ಯಾವ ರೀತಿಯಲ್ಲಿ ಅನಾವರಣಕೊಂಡಿವೆ ಎಂದು ಗುರುತಿಸಬಹುದು. ಕುಟುಂಬದ ವ್ಯವಸ್ಥೆ ತಾಯಿ ಪಾತ್ರವೇನು, ಮಗನ ಸ್ಥಾನವೇನು ಎಂದು ಗೋಚರವಾಗುತ್ತದೆ.

ಕುಟುಂಬ ದೌರ್ಜನ್ಯಕ್ಕೆ ಮತ್ತೊಂದು ಉದಾಹರಣೆ: 'ಪ್ರಾಯಶ್ಚಿತ್ತ' ಎನ್ನುವ ಕಥೆ. ತಾಯಿಯ ಸಾವಿಗೆ ಕಾರಣವಾಗುವ ಕಳಂಕಿತಳಾಗುವ ಸಂದರ್ಭ. ಅದು ಆಕೆಯ ಮಗಳ ಮಡಿಲಿಗೂ ವರ್ಗಾಯಿಸಲ್ಪಟ್ಟು ನಳಿನಿ ಅನುಭವಿಸುವ ಮಾನಸಿಕ ತುಮುಲ ಇಲ್ಲಿದೆ. ನಳಿನಿಯನ್ನು ಪ್ರೀತಿಸುವ ಮೂರ್ತಿ ಹಾಗೂ ತಂದೆ ನೀಡುವ ಶಿಕ್ಷೆಗಳನ್ನು ಅನುಭವಿಸುತ್ತ, ನರಳುವ ಆತನ ತಾಯಿ, ಮಗನಿಗೆ ನೀಡಬೇಕಾದ ಶಿಕ್ಷೆಯನ್ನು ತನ್ನ ಹೆಂಡತಿಗೆ ನೀಡುತ್ತಾ, ಆ ಮೂಲಕ ತನ್ನ ಕಾರ್ಯಸಾಧನೆ ಮಾಡಿಕೊಳ್ಳುವ ಮೂರ್ತಿಯ ಅಪ್ಪನಂಥವರು ಇಂದಿಗೂ ಇದ್ದಾರೆ. ತಾನು ಪ್ರೀತಿಸಿದವಳನ್ನು ಹೊಂದಲೇಬೇಕಾದರೆ ಗಂಡಿಗೆ ಆರ್ಥಿಕ ಸ್ವಾತಂತ್ರ್ಯ ಇರಬೇಕು ಮತ್ತು ಛಲ, ದೃಢಮನಸ್ಸು, ಹೆತ್ತವರಲ್ಲಿ ಅರಿವು ಮೂಢಿಸುವ ಎದೆಗಾರಿಕೆಯೂ ಬೇಕು ಎಂಬ ಸಂದೇಶವನ್ನು ಈ ಕಥೆಯ ಮೂಲಕ ಗೌರಮ್ಮ ನೀಡಿದ್ದಾರೆ.

"ಕುಟುಂಬ ದೌರ್ಜನ್ಯಕ್ಕೆ ಒಳಗಾಗುತ್ತಿದ್ದು, ಆ ದೌರ್ಜನ್ಯವನ್ನು ಮಗನಿಗಾಗಿ ಸಹಿಸುತ್ತಿದ್ದ ಮೂರ್ತಿಯ ತಾಯಂದಿರ ತಾಯ್ತನದ ದರ್ಶನವಿಲ್ಲದೆ"[೧೭] ತಾನೇ ತಪ್ಪಿತಸ್ಥನಾಗಿದ್ದರೂ ನಳಿನಿಯ ತಾಯಿಯ ಸಾವಿಗೆ ಕಾರಣನಾದರೂ ಸಮಾಜದ ದೃಷ್ಟಿಯಲ್ಲಿ ಸಾಚಾ ಮನುಷ್ಯನಾಗಿಯೇ ಉಳಿಯುವ ಮೂರ್ತಿಯ ಅಪ್ಪನಂಥವರು ಇಂದಿಗೂ ಕಾಣಸಿಗುತ್ತಾರೆ.

"ಕೌಸಲ್ಯಾನಂದನ ಆತ್ಮೀಯ ಗೆಳತಿಯರ ಸುಂದರ ಚಿತ್ರಣ ಇಲ್ಲಿದೆ. ವಸಂತ (ವೆನ್ನಿ) ಮತ್ತು ಸೀತಾ ಮಧ್ಯದ ಗೆಳೆತನ, ಒಡನಾಟ"[೧೯], ಪ್ರೀತಿಯ ಚಿತ್ರಣವಿದೆ. ಹುಡುಗಾಟದ ಹುಡುಗಿ ವಸಂತ. ಕುಂಟ ರಾಮುವನ್ನು ಪ್ರೀತಿಸುವುದು, ಆತನ ಮೂಲಕ ಗೆಳತಿ ನೊಂದಾಗ ಅದನ್ನು ಸಹಿಸದ ಸೀತೆ ರಾಮುವಿನ ಮುಂದೆ ಪ್ರತಿಭಟಿಸಿದಾಗ ಮನನೊಂದ ರಾಮು ಊರು ಬಿಡುತ್ತಾನೆ.

"ತಾನು ಮಾಡಿದ ತಪ್ಪನ್ನು ತಾನೇ ಸರಿಪಡಿಸಿದ ತೃಪ್ತಿ ಸೀತೆಗಿದೆ. ಗೌರಮ್ಮನವರ ಈಜುಗಾರಿಕೆಗೆ ಪುಷ್ಠಿ ಒದಗಿಸುವ ವಿಚಾರಗಳು ಈ ಕಥೆಯಲ್ಲಿವೆ. ರಾಮುವಿನಲ್ಲಿದ್ದ ಮಮತೆಯ ಅರಿವು ಆತ ತನ್ನ ಪ್ರೀತಿಯನ್ನು ಬಹಳ ದುಃಖದಿಂದಲೇ ದೃಢೀಕರಿಸಿರುವುದರಿಂದ ಸೀತೆ ತಾನು ಮಾಡಿದ ಒಂದು ತಪ್ಪಿನಿಂದ ತಪ್ಪಿಹೋದ 'ಕುಟುಂಬ' ವನ್ನು ಮತ್ತೆ ಒಂದುಗೂಡಿಸುವಲ್ಲಿ ಯಶಸ್ವಿಯಾಗುತ್ತಾಳೆ. ಇಂತಹ ಸಾರ್ಥಕತೆಯ ಮೂಲಕವೇ ಗೌರಮ್ಮ ಆಪ್ತರಾಗುತ್ತಾರೆ. ಅವರ ಪ್ರತಿಯೊಂದು ಕಥೆಯೂ 'ಕುಟುಂಬ' ತಾಯ್ತನದ ನೆಲೆಯ ಮೇಲೆ ನಿಂತಿದೆ ಎಂದರೆ ತಪ್ಪಾಗಲಾರದು.

"ಕುಟುಂಬ ಸಮಾಜದ ಒಂದು ಚಿಕ್ಕ ಘಟಕ. ಈ ಘಟಕದ ಮುಖ್ಯ ಪಾತ್ರಗಳೇ ಗಂಡು-ಹೆಣ್ಣು. ಈ ಘಟಕ ಚೆನ್ನಾಗಿದ್ದರೆ ಮಾತ್ರ ಸ್ವಸ್ಥ ಸಮಾಜ ನಿರ್ಮಾಣವಾಗಲು ಸಾಧ್ಯ ಇದು ಹಿಂದಿನವರ ಆದರ್ಶ"[೨೦.] ಕುಟುಂಬ ಪದ್ಧತಿಯಲ್ಲಿ ಅಸಂಖ್ಯ ರೀತಿಯ ನೋವು, ಹಿಂಸೆ, ಘರ್ಷಣೆ ಜೊತೆಯಾಗಿಯೇ ನಡೆದುಬರುತ್ತವೆ. ಕುಟುಂಬ ವ್ಯವಸ್ಥೆಯ ಮೇಲೆ ಪುರುಷನ ದಬ್ಬಾಳಿಕೆ, ತನ್ನ ಮಾತೇ ಅಂತಿಮ ಎಂಬ ಘರ್ಷಣೆ, ಪ್ರಭುತ್ವ ನಡೆದುಬಂದಿದೆ. ಇಂತಹ ಮನೆಯೊಳಗಿನ ಹಿಂಸೆಯನ್ನು ಸದಾ ಸಹಿಸುತ್ತಲೇ ಬಂದ ಹೆಣ್ಣು ತನ್ನ ದೌರ್ಭಾಗ್ಯಕ್ಕಾಗಿ ಕಣ್ಣೀರಿಡುತ್ತಲೇ ಇದ್ದಂತಹ ಸಮಯದಲ್ಲಿಯೇ ತಮ್ಮ ರಚನೆಯ ಮೂಲಕ ಕುಟುಂಬ ವ್ಯವಸ್ಥೆಯ ಬಗ್ಗೆ ಕಟ್ಟಿಕೊಟ್ಟಿದ್ದಾರೆ.

"ಪಾಪನ ಮದುವೆ" ಕುಟುಂಬ ವಿವಾಹ ಪದ್ಧತಿಗೆ ಈ ಕಥೆ ಒಂದು ಉತ್ತಮ ಉದಾಹರಣೆ. 'ಪಾಪನ' ಮನೆ ಕನ್ಯೆ ನೋಡಲು ಹೋದವರು ಕನ್ಯೆಯ ಮನೆಯಲ್ಲಿ ಸ್ನಾನ, ಊಟ, ನಿದ್ದೆ, ಮಾಡಿಕೊಂಡು ಹೋದ ದಿನದ ಮಾತು ಇಂದು ಅಚ್ಚರಿ ಹುಟ್ಟಿಸುತ್ತದೆ. ಮದುವೆ-ಸಂತಾನವಾದ ಮೇಲೆಯೂ ಬಂದ ಬೀಗರು ಹೋಟೆಲ್‌ಗಳಲ್ಲಿ ಇಳಿದುಕೊಂಡು ಕೇವಲ ಭೇಟಿಗಾಗಿ ಮಾತ್ರ ಬರುವ ಅಮಾನವೀಯ ದಿನಗಳವು. ಪ್ರೀತಿ, ಆತ್ಮೀಯತೆಯನ್ನು ಕಳೆದುಕೊಂಡ ಯಾಂತ್ರಿಕ ಸಂಬಂಧವಾಗಿರುವ ದಿನಮಾನಗಳಲ್ಲಿ ಇದು ನಿಜಕ್ಕೂ ಅಚ್ಚರಿಯ ಸಂಗತಿಯೇ ಆಗಿದೆ. ವಿದ್ಯಾಮಾನ ನಮ್ಮನ್ನು ಅಬಂಧುಗಳನ್ನಾಗಿ ಮಾಡುತ್ತಿದೆ. ತಾಯಿ-ತಂದೆ, ಅಕ್ಕ-ತಂಗಿ ಸಂಬಂಧಗಳನ್ನು ಗಂಡು

ಮಕ್ಕಳು ದೂರೀಕರಿಸಿದರೆ, ಮಗಳು ಅಳಿಯ ಮಾತ್ರ ಸಂಬಂಧೀಕರಿಸಿ ಎನ್ನುವ ಅತ್ತೆ-ಮಾವಂದಿರ ಮಪ್ಪ ಸಂಸ್ಕೃತಿ ಇಂದು ಹೆಚ್ಚಾಗುತ್ತಿದೆ. ಮದುವೆ ಎಂದರೆ ಅದೊಂದು ಸಂಪ್ರದಾಯ, ಮದುವೆಯಾದ ಮೇಲೆ ಕನ್ಯೆಯ ಸಂಬಂಧಿಕರು ದೂರಮಾಡಿ, ನಮ್ಮ ಕನ್ಯೆ ಮಾತ್ರ ಸಾಕು ಎನ್ನುವ ಮನೋಧರ್ಮವನ್ನು ಈ ಕತೆ ತಿಳಿಸಿಕೊಡುತ್ತದೆ. ಕುಟುಂಬ ವಿವಾಹ ವಿಧಾನಗಳ ಮಾವಗಳು ಗಂಡು ಮಗುವಿನ ಕಡೆ ಒಪ್ಪಿದ ಮೇಲೆ ಆ ವಿವಾಹ ನಡೆಯಿತು. ಅಂದರೆ ಇಲ್ಲಿ ಕನ್ಯೆಯ ಒಪ್ಪಿಗೆ ಯಾರಿಗೂ ಬೇಕಿಲ್ಲ ಎನ್ನುವ ಮಾತು ವಾಸ್ತವವಾಗಿದೆ.

ಕನ್ನೆಯ ನೋಡಲು ಹೋದ ಮೇಲೆ ಕನ್ನೆಯ ಮನೆಯಲ್ಲಿ ನಡೆಯುವ ಒಂದು ಪ್ರಸಂಗ "ವಧು ಪರೀಕ್ಷೆಗೆ ಹೋದ ಪಾಪ (ವರ) ಹುಡುಗಿಗೆ, ಅಡುಗೆ ಮಾಡೋಕೆ ಬರುತ್ತೇ?... ಎಂದು ಕೇಳಿದಾಗ ಹುಡುಗಿ 'ಸ್ವಲ್ಪ ಸ್ವಲ್ಪ ಬರುತ್ತೆ' ಎಂದಳು, ಅದಕ್ಕೆ ಪಾಪ 'ಊಟ ಮಾಡ್ಬೇಕಾದ್ರೆ ಚೆನ್ನಾಗಿ ಮಾಡೋಕ್ಕೆ ಕಲಿತ್ಕೋಬೇಕು ಎಂದ"[೨೧] ಇದನ್ನು ಗಮನಿಸಿದಾಗ ನಮ್ಮ ಸಂಪ್ರದಾಯ ಮದುವೆಯ ಆಚಾರಗಳು ಹೆಣ್ಣನ್ನು ಯಾವ ಸ್ಥಿತಿಯಲ್ಲಿ ಇಟ್ಟಿದೆ ಎನ್ನುವುದರ ವ್ಯಂಗವಾಗಿದೆ.

"ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಕೇಂದ್ರವಾಗಿ ನಿಂತ ಗಂಡು ತನ್ನನ್ನು ಪರಿಪೂರ್ಣ 'ನಾನು' ಎಂದು ನಿರ್ವಹಿಸಿಕೊಂಡು ಹೆಣ್ಣನ್ನು 'ಅನ್ಯ'ವಾಗಿ ಭಾವಿಸಿದ. ಹೀಗೆ ಅನ್ಯವಾಗಿ ಅನುಬಂಧವಾಗಿ ಸೇರಲ್ಪಟ್ಟ ಹೆಣ್ಣಿನ ಭಿನ್ನತೆಯನ್ನು ಭೇದವಾಗಿ ಗ್ರಹಿಸಲಾಯಿತು. ಗಂಡು ಹುಟ್ಟಿನೊಂದಿಗೇ ಅಸ್ತಿತ್ವವನ್ನು ಪಡೆದುಕೊಂಡರೆ ಜೈವಿಕ ಹಾಗೂ ಸಾಮಾಜಿಕ ಸ್ಥಿತ್ಯಂತರಗಳಿಗೆ ಎದುರಾಗುವ ಹೆಣ್ಣಿಗೆ ಅಸ್ತಿತ್ವದ ಹುಡುಕಾಟವೇ ದೊಡ್ಡ ಹೋರಾಟ, "ಗಂಡು ಅರ್ಥೈಸಿದ ಹೆಣ್ಣಿನ ಅಸ್ಥಿತ್ವದ ಹುಡುಕಾಟವೇ ದೊಡ್ಡ ಹೋರಾಟ, ಗಂಡು ಅರ್ಥೈಸಿದ ಹೆಣ್ಣಿನ ಅಸ್ತಿತ್ವ, ವ್ಯಕ್ತಿತ್ವ 'ಕುಟುಂಬಿನಿ', 'ಜಗನ್ಮಾಥೆ', ಪತೀವ್ರತೆ, ವೇಶ್ಯೆ ಮಾದರಿಯವು"[೨೨]. ಈ ಮಾದರಿಗಳಿಗೆ ಬಗ್ಗುವಂತೆ ಹೆಣ್ಣಿನ ಗುಣಸ್ವಭಾವ ವ್ಯಕ್ತಿತ್ವವನ್ನು ಸಹಜತೆ ಎಂಬಂತೆ ನಂಬಿಸಲಾಯಿತು. ಈ ವೈಭವೀಕರಣ ಎಷ್ಟರ ಮಟ್ಟಿಗೆ ನಡೆದಿದೆ ಎಂದರೆ ಹೆರದ ಹೆಣ್ಣನ್ನು ಹೆಣ್ಣಿನ ಎನ್ನುವಷ್ಟು! ಹೆಣ್ಣುತನವನ್ನು ತಾಯ್ತನದೊಂದಿಗೆ ಶೀಲದೊಂದಿಗೆ ಸಮೀಕರಿಸಿ, ಆಕೆಯ ಇಡಿಯ ವ್ಯಕ್ತಿತ್ವವನ್ನು ಅನುಭವವನ್ನು ನಿರಾಕರಿಸಲಾಯಿತು. ಆದರೆ ತಾಯ್ತನ ಅಥವಾ ಪಾತಿವ್ರತ್ಯಗಳು ಹೆಣ್ಣುತನದ ನಿಜದ ತುಡಿತಗಳಾಗಿವೆಯೋ? ಹೆಣ್ಣಿನ ಅಂತರಂಗದ ಅನುಭವ ಮತ್ತು ಗಂಡು ಹೆಣ್ಣನ್ನು ಗ್ರಹಿಸಿದ ಅನುಭವಕ್ಕಿಂತ ಬೇರೆಯಾದುದು. ಹೀಗೆ ಹೆಣ್ಣೊಬ್ಬಳಿಗೆ ತಾನು ತಾನಾಗಿರದ ಸ್ಥಿತಿಯನ್ನು ಒಪ್ಪಿಕೊಳ್ಳುವಲ್ಲಿ ತನ್ನದಲ್ಲದ ಅನುಭವಕ್ಕೆ ಒಗ್ಗಿಕೊಳ್ಳುವಲ್ಲಿ ಒತ್ತಡವಿದೆ. ಈ ಬಗೆಯ ಸಂಸ್ಕೃತಿಯ ಒತ್ತಡಗಳು ಗಂಡಿಗಿಲ್ಲ. ಒಂದೇ ಕೌಟುಂಬಿಕ ಸಾಮಾಜಿಕ ಪರಿಸರದಲ್ಲಿ ಬೆಳೆದ ಗಂಡು ಹೆಣ್ಣು ಮಕ್ಕಳಿಗೆ ಒದಗುವ ಸಂದರ್ಭ, ಸಿಗುವ ಒತ್ತಾಸೆ, ಭರವಸೆಗಳು, ಅನುಭವ,

ಅವಕಾಶಗಳು ವಿಭಿನ್ನವಾಗಿರುತ್ತದೆ. ಹೀಗೆ ಭಿನ್ನವಾದ ಒಂದು ಸಾಂಸ್ಕೃತಿಕ ಸಂದರ್ಭದಲ್ಲಿ ಬದುಕಬೇಕಾದ ಹೆಣ್ಣಿನ ಕನಸು ಬಯಕೆ ಮತ್ತು ಗ್ರಹಿಕೆಗಳು ಬೇರೆಯಾಗಿರುತ್ತವೆ.

ಹೀಗಾಗಿಯೇ ಜಗತ್ತನ್ನು ಕಾಣುವ ಅನುಭವಿಸುವ ಮತ್ತು ಅಭಿವ್ಯಕ್ತಿಸುವ ಪುರುಷ ಸಂವೇದನೆಗೂ ಹೆಣ್ಣೊಬ್ಬಳ ಪರಿಗ್ರಹಿಗೆ ಹಾಗೂ ಅಭಿವ್ಯಕ್ತಿ ವಿನ್ಯಾಸಕ್ಕೂ ಅಂತರವಿರುತ್ತದೆ ಎಂಬುದನ್ನು ಕೊಡಗಿನ ಗೌರಮ್ಮನವರ ಕಥೆಗಳಲ್ಲಿ ನಾವು ಗುರುತಿಸಬಹುದು.

ಮನೆಮನೆಯಲ್ಲಿ ಜರುಗುವ ವಿದ್ಯಮಾನ ಕತೆಗಳಾಗಬಹುದು ಎಂಬುದನ್ನು ಕೊಡಗಿನ ಗೌರಮ್ಮನವರ ಕತೆಗಳ ಬಹುಮುಖ್ಯ ಲಕ್ಷಣ. ಕುಟುಂಬ ತನ್ನ ಸದಸ್ಯರಿಗೆ ಜೀವನೋಪಾಯದ ಕೌಶಲವನ್ನು ಕಲಿಸಿಕೊಡುತ್ತದೆ ಎಂಬ ನಂಬಿಕೆ ನಮ್ಮ ಸಂಸ್ಕೃತಿಯದು. ಅಷ್ಟಾದರೂ ಜೀವನವನ್ನು ಸಮರ್ಥವಾಗಿ ಎದುರಿಸಲಾಗದ ಎಷ್ಟೋ ಕುಟುಂಬ ಸದಸ್ಯರು ಖಿನ್ನತೆಗೆ ಒಳಗಾಗಿ, ಜೀವನ ವ್ಯರ್ಥಮಾಡಿಕೊಳ್ಳುತ್ತಾರೆ. ಅಸಹಾಯಕರಾಗಿ ಸಾವಿನ ಉರುಳಿಗೆ ತಮ್ಮನ್ನು ಒಡ್ಡಿಕೊಳ್ಳುತ್ತಾರೆ. ಹೀಗಾಗಲು ಕಾರಣವೇನು? ನಮ್ಮ ಕುಟುಂಬವೆಂಬ ಸಂಸ್ಥೆಯಲ್ಲಿ ಏನಾದರೂ ಲೋಪವಿದೆಯೆ? ಹೌದು ಎನ್ನುವುದಾದರೆ ಹೇಗೆ? ಕುಟುಂಬವನ್ನೆಲ್ಲಾ ಹೇಳಿಕೊಟ್ಟರೂ ಕೆಲವೊಮ್ಮೆ ಜೀವನದ ನಿರ್ದಿಷ್ಟ ಮೌಲ್ಯವನ್ನು ಆ ಸದಸ್ಯರಿಗೆ ತಿಳಿಹೇಳಲಾಗದೆ ಸೋಲಾಗುತ್ತದೆ ಎಂಬುದು ಜಿವೆ? ಅರ್ಥಪೂರ್ಣವಾದ ಕುಟುಂಬ ವ್ಯವಸ್ಥೆಯಿಂದ ಜೀವನವೆಂಬ 'ನೈಜಕಲೆ' ಸಿದ್ಧಿಸುತ್ತದೆ.

ಕೊನೆ ಟಿಪ್ಪಣಿ:

೧೧) ರಾಮಚಂದ್ರರಾವ್.ಎಸ್.ಕೆ : ವಿವಾಹ ಪದ್ಧತಿಗಳು, ಪುಟ:9 ಪ್ರಕಾಶನ: ಬೆಂಗಳೂರು ವಿಶ್ವವಿದ್ಯಾಲಯ., ವರ್ಷ: 1992

೧೨) ಶಾರದಾ ಮುಳೂರ (ಸ) ಕೊಡಗಿನ ಗೌರಮ್ಮ ಮತ್ತು ತ್ರಿವೇಣಿ ಅವರ ಸಾಹಿತ್ಯ ಅವಲೋಕನ ಪುಟ– 32, ವಿ.ವಿ., ಪ್ರಕಾಶನ: ಕರ್ನಾಟಕ ಸಾಹಿತ್ಯ ಅಕಾಡೆಮಿ – 2001

೧೩) ದಿ. ಕೊಡಗಿನ ಗೌರಮ್ಮನ; ಸಮಗ್ರ ಸಣ್ಣ ಕಥೆಗಳು– ಪುಟ–89 ಪ್ರಕಾಶನ: ಅನನ್ಯ ಪ್ರಕಾಶನ, ಪ್ರಕಟಣೆ: 2008

೧೪) ಡಾ॥ ಕಾಳೇಗೌಡ ನಾಗವಾರ; ಜೀವನ ಪ್ರೀತಿ, ಪುಟ:245, ಪ್ರಕಾಶನ: ಮಾನಸ ಗಂಗೋತ್ರಿ, ಪ್ರಕಟ: 2002

೧೫) ಹೆಚ್.ನಾಗವೇಣಿ : ಕೊಡಗಿನ ಗೌರಮ್ಮ , ಪುಟ: 52 ಪ್ರಕಟಣೆ: ಸಾಹಿತ್ಯ ಅಕಾಡೆಮಿ, ಪ್ರಕಟ : 2012

೧೬) ದಿ. ಕೊಡಗಿನ ಗೌರಮ್ಮನ; ಸಮಗ್ರ ಸಣ್ಣ ಕಥೆಗಳು– ಪುಟ–46 ಪ್ರಕಾಶನ: ಅನನ್ಯ ಪ್ರಕಾಶನ, ಪ್ರಕಟಣೆ: 2008

೧೭) ದಿ. ಕೊಡಗಿನ ಗೌರಮ್ಮ; ಸಮಗ್ರ ಸಣ್ಣ ಕಥೆಗಳು– ಪುಟ–46 ಪ್ರಕಾಶನ: ಅನನ್ಯ ಪ್ರಕಾಶನ, ಪ್ರಕಟಣೆ: 2008

೧೮) ಶಾರದಾ ಮುಳೂರ (ಸ) ಕೊಡಗಿನ ಗೌರಮ್ಮ ಮತ್ತು ತ್ರಿವೇಣಿ ಅವರ ಸಾಹಿತ್ಯ ಅವಲೋಕನ ಪುಟ– 20(30), ವಿ.ವಿ., ಪ್ರಕಾಶನ: ಕರ್ನಾಟಕ ಸಾಹಿತ್ಯ ಅಕಾಡೆಮಿ – 2001

೧೯) ಶಾರದಾ ಮುಳೂರ (ಸ) ಕೊಡಗಿನ ಗೌರಮ್ಮ ಮತ್ತು ತ್ರಿವೇಣಿ ಅವರ ಸಾಹಿತ್ಯ ಅವಲೋಕನ ಪುಟ– 26, ವಿ.ವಿ., ಪ್ರಕಾಶನ: ಕರ್ನಾಟಕ ಸಾಹಿತ್ಯ ಅಕಾಡೆಮಿ – 2001

೨೦) ಶಾರದಾ ಮುಳೂರ (ಸ) ಕೊಡಗಿನ ಗೌರಮ್ಮ ಮತ್ತು ತ್ರಿವೇಣಿ ಅವರ ಸಾಹಿತ್ಯ ಅವಲೋಕನ ಪುಟ– 22, ವಿ.ವಿ., ಪ್ರಕಾಶನ: ಕರ್ನಾಟಕ ಸಾಹಿತ್ಯ ಅಕಾಡೆಮಿ – 2001

೨೧) ಹೆಚ್.ನಾಗವೇಣಿ : ಕೊಡಗಿನ ಗೌರಮ್ಮ , ಪುಟ: 52 ಪ್ರಕಟಣೆ: ಸಾಹಿತ್ಯ ಅಕಾಡೆಮಿ, ಪ್ರಕಟ : 2012

೨೨) ಎಚ್.ದಂಡಪ್ಪ, ಬಿ.ಎನ್.ಸುಮಿತ್ರ ಬಾಯಿ,: ಸುವರ್ಣ ಸಾಹಿತ್ಯ ವಿಮರ್ಶೆ, ಪ್ರಕಟಣೆ: ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪು 41, ಪ್ರಕಟ: 2006

## ಅಧ್ಯಾಯ – 4

### ಕುಟುಂಬ ವ್ಯವಸ್ಥೆ: ಹೆಣ್ಣು ಮತ್ತು ಗಂಡಿನ ನಡುವಿನ ಸಂಬಂಧ

ಕೊಡಗಿನ ಗೌರಮ್ಮನವರ ಕತೆಗಳಲ್ಲಿ ವ್ಯಕ್ತವಾಗಿರುವ ಹೆಣ್ಣು ಗಂಡಿನ ನಡುವಿನ ಸಂಬಂಧವನ್ನು ಗುರುತಿಸುವ ಪ್ರಯತ್ನ ಈ ಅಧ್ಯಾಯದ್ದಾಗಿದೆ. ಗಂಡು ಹೆಣ್ಣಿನ ಸಂಬಂಧಗಳ ಪ್ರಧಾನ, ಅದೀನ ನೆಲೆಯ ಅಸಮಾನತೆಯನ್ನು ಆದರ್ಶ ಎಂದು ನಂಬಿರುವ ಭಾರತದ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಗೆ ಸ್ವಂತಿಕೆ ಹಾಗೂ ಸನ್ಮಾನಗಳಿಲ್ಲ. ಸ್ವಾತಂತ್ರ್ಯವಂತೂ ಬಹುದೂರ, ವಿಧೇಯತೆ ಸೇವೆ ಸಮರ್ಪಣೆಯ ಮೂಲಕ ಆದರ್ಶ ಹೆಂಡತಿಯಾಗುವುದನ್ನೇ ಮೌಲ್ಯವೆನ್ನುವ ನಂಬಿಕೆ ದಟ್ಟವಾಗಿದ್ದ ಕಾಲವದು. ಬಹುಪಾಲು ನವೋದಯ ಲೇಖಕಿಯರು ಪರೋಕ್ಷವಾಗಿ ಬೆಂಬಲಿಸಿದ್ದು ಈ ಆದರ್ಶವನ್ನು. ಹೀಗೆ ಲಿಂಗತ್ವ ಸಮ ನ್ಯಾಯಕ್ಕಾಗಿ ಮಹಿಳೆಯರು ಪ್ರಕಟವಾಗಿ ದನಿ ಎತ್ತದ ಕಾಲದಲ್ಲಿ ಗೌರಮ್ಮನವರು ಲಿಂಗಾಧಾರಿತ ಹಿಂಸೆಗಳಿಗೆ ಜಗ್ಗದೇ ಪ್ರತಿತಂತ್ರ ಹೂಡುವ ಸ್ವಾಯತ್ತ ಮಹಿಳೆಯರ ಮೂಲಕ ಸ್ತ್ರೀ ಸಮಸ್ಯೆಯ ಪರಿಹಾರವನ್ನು ಸ್ತ್ರೀ ಸಶಸ್ತ್ರೀಕರಣದಲ್ಲಿ ಕಾಣಿಸುತ್ತಾರೆ. ಹೀಗೆ ಸ್ತ್ರೀ ಬದುಕಿನ ವಾಸ್ತವಗಳನ್ನು ಜೀವನಾನುಭವದ ನಿಕಷ್ಪದಲ್ಲಿ ಪರಿಶೀಲಿಸುತ್ತಾರೆ. ಮನುಷ್ಯ ಸ್ವಭಾವದ ಸಂಕೀರ್ಣತೆಯನ್ನು ಸ್ತ್ರೀ ವ್ಯಕ್ತಿತ್ವದ ವೈವಿಧ್ಯತೆಯನ್ನು ಕಪ್ಪು ಬಿಳುಪಿನ ಪರಿಯಚ್ಚುಗೊಳಿಸದ ಅವರು ಸತಿತ್ವ ಗೃಹಿಣಿತ್ವದ ಲಕ್ಷ್ಮಣ ರೇಖೆಗಳ ಮೂಲಕ ವೇದನೆ ಅನುಭವಿಸುವ ಸ್ತ್ರೀ ಸಂವೇದನಗೆ ಆತ್ಮ ಸನ್ಮಾನದ – ಆತ್ಮ ನಿರ್ಭರತೆಯ ಹೊರದಾರಿಯನ್ನು ತೋರುತ್ತಾರೆ. ಇಲ್ಲಿ ಮುಖ್ಯವಾದ ಸಂಬಂಧಗಳು ಸಮಾಜದಲ್ಲಿ ಕಾಣಿಸಿಕೊಳ್ಳುವ ಪರಿಪಾಠವನ್ನು ಅನಾವರಣಗೊಳಿಸಲಾಗಿದೆ.

ಹೆಣ್ಣು ಸಂಶಯ ಸ್ವಭಾವದವಳೆನ್ನುವರು. ಇರಬಹುದು, ಶಿಕ್ಷಣದ ಅಭಾವ, ಅವಲಂಬನೆಯ ಬದುಕಿನ ಸ್ಥಿತಿಗಳಲ್ಲಿ ಆಕೆ ವೈಯಕ್ತಿಕ ಸಂಬಂಧಗಳ ವಿಚಾರದಲ್ಲಿ ಸಂಶಯ ಪಿಶಾಚಿಯೇ ಆಗಿರಬಹುದು. ಆದರೆ ಗಂಡಸಿನ ಸಂಶಯ ಇದೊಂದಕ್ಕೆ ಸೀಮಿತವಲ್ಲ. ಇದಕ್ಕೆ ಉತ್ತಮ ಉದಾಹರಣೆ ಎಂದರೆ "ಅಪರಾಧಿ ಯಾರು?" ಕಥೆಯ ಕಥಾನಾಯಕಿ ಪುಟ್ಟ ಹೆಣ್ಣುಮಗುವುಳ್ಳ ಒಬ್ಬ ಅನಾಥ ಬಡ ಬ್ರಾಹ್ಮಣ ವಿಧವೆ, ಹೊಟ್ಟೆಪಾಡಿಗಾಗಿ ಬ್ರಾಹ್ಮಣ ಸಮಾಜದ ಒಬ್ಬ ಗಣ್ಯ ಶ್ರೀಮಂತನ

ಮನೆಯಲ್ಲಿ ಅಡುಗೆಯವಳಾಗಿ ಸೇರುತ್ತಾಳೆ. ಅಲ್ಲಿ ಆ ಗಣ್ಯನಿಂದಲೇ ಅತ್ಯಾಚಾರಕ್ಕೆ ಒಳಗಾಗಿ ಅಪವಾದದ ಹೊರೆಹೊತ್ತು, ಆತನ ಕುಮ್ಮಕ್ಕಿನಿಂದ ತನ್ನ ಸಮಾಜದವರಿಂದಲೇ ಬಹಿಷ್ಕಾರ ಹಾಕಿಸಿಕೊಂಡು ಆತನಿಂದಲೇ ಮನೆಯಿಂದ ಹೊರದೂಡಲ್ಪಡುತ್ತಾಳೆ. ತಮ್ಮವರಿಂದ ಬಹಿಷ್ಕರಿಸಲ್ಪಟ್ಟ ಆ ಅಸಹಾಯಕ ಹೆಣ್ಣು ತನಗಿನ್ನು ಆತ್ಮಹತ್ಯೆಯೇ ಗತಿ ಎಂದು ತನ್ನ ಮಗುವಿನೊಂದಿಗೆ ಆ ಕೃತ್ಯಕ್ಕೆ ಮುಂದಾದಾಗ ಪರಿಚಿತ ಮುಸಲ್ಮಾನ ಬಂಧುಗಳು ಆಕೆಯನ್ನು ರಕ್ಷಿಸಿ "ನಮ್ಮ ಧರ್ಮದಲ್ಲಿ ನಿನಗೆ ರಕ್ಷಣೆ ಇದೆ"[೨೩] ಎಂದು ಸಮಾಧಾನಿಸಿ ಆಕೆಯ ಇಚ್ಛೆಯಂತೆ ಆಕೆಯನ್ನು ತಮ್ಮ ಧರ್ಮಕ್ಕೆ ಸೇರಿಸಿಕೊಳ್ಳುತ್ತಾರೆ. ಈ ಮತಾಂತರದ ಸುದ್ದಿ ತಿಳಿದಾಕ್ಷಣ ಆ ಹೆಣ್ಣಿಗೆ ಅನ್ಯಾಯ ಎಸಗಿದ ಗಣ್ಯ ವ್ಯಕ್ತಿ ಊರಿನ ಪ್ರಮುಖ ಹಿಂದೂಗಳ ಸಭೆ ಕರೆದು, ' ಮೊನ್ನೆ ದಿನ ಹಿಂದೂ ರಮಣಿಯೊಬ್ಬಳು ಮುಸಲ್ಮಾನ ಧರ್ಮ ಸ್ವೀಕರಿಸಿದ್ದು, ಊರಿನ ಹಿಂದೂಗಳೆಲ್ಲ ಬಹಳ ವಿಷಾದವನ್ನುಂಟು ಮಾಡಿದೆ, ಇನ್ನು ಮುಂದೆ ಈ ರೀತಿಯ ಅನಾಚಾರ ಸಂಭವಿಸದಂತೆ ಎಚ್ಚರ ವಹಿಸಬೇಕು ಹಾಗೂ ಹಿಂದೂ ರಕ್ಷಣೆ ಮಾಡಬೇಕು.

ಮನುಷ್ಯನ ಸಂಬಂಧವನ್ನು ನೋಡದೇ ಧರ್ಮಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡುತ್ತಾರೆ. ಇಲ್ಲಿ ಹೆಣ್ಣು ಒಬ್ಬಳು ತಾನು ಅಪರಾಧಿ ಅಲ್ಲವೆಂದು, ಇಡೀ ಸಮಾಜಕ್ಕೆ ಗೊತ್ತು. ಅಂದರೆ ಅಲ್ಲಿ 'ಅವಳು' ಅಂದರೆ ಹೆಣ್ಣು ಏನು ಮಾಡಡಲು ಸಾಧ್ಯವೆಂದು ತುಂಬಾ ಅಮಾನುಷವಾಗಿ ಆಕೆಯ ಬಗ್ಗೆ ಮಾತನಾಡುತ್ತಾರೆ. ಈ ಗೌರವ ಕೊಡುವ ನಮ್ಮ ಸಮಾಜ, ಪುರುಷ ಸಂಬಂಧವನ್ನು ಮಾತ್ರ ಲೆಕ್ಕಕ್ಕೆ ತೆಗೆದುಕೊಂಡಿತೇ ಹೊರತು, ಇಲ್ಲಿ ಇವರು ಇಬ್ಬರು ಮನುಷ್ಯರು ಇಲ್ಲಿ ಯಾವುದೇ ಒಂದು ರೀತಿಯ ಗೌರವ ಸಂಬಂಧಗಳು ನಡೆದುಕೊಂಡು ಹೋಗಿವೆ ಎಂದು ಯಾರೂ ತೀರ್ಮಾನಿಸಲಾರರು. ಕಾರಣ ನಮ್ಮ ಸಂಬಂಧಗಳಿಗಿಂತ ಧರ್ಮ ಇರುವ ಧರ್ಮಿ ಹೇಳುವ ಸಂಬಂಧವನ್ನು ಮಾತ್ರ ಮನುಷ್ಯರು ಪಾಲಿಸುತ್ತಾರೆಯೇ ಹೊರತು ಸಂಬಂಧಗಳು, ಸುಖ, ದುಃಖ ಧಾಟಿಯನ್ನು ನೋಡಲು ಹೋಗುವುದಿಲ್ಲ. ಪುರುಷನು ಹೇಳಿದ್ದನ್ನು ಮಾತ್ರ ಇಲ್ಲಿ ನಡೆಯಿತೇ ಹೊರತು, ಹೆಣ್ಣೇ ದುಃಖಕ್ಕೆ ದಾರಿಯನ್ನು ಕಾಣಿಸುವುದಿಲ್ಲ. ತನ್ನ ಸುತ್ತಲಿನ ಎಲ್ಲವನ್ನೂ ಅವನು ಸದಾ ಸಂದೇಹದಿಂದಲೇ ನೋಡುವುದು.

"ಹೆಣ್ಣು, ಹೊನ್ನು, ಮಣ್ಣುಗಳೆಂಬ ಭೇದವಿಲ್ಲದೆ'[೨೪] ಎಲ್ಲಾ ಸಂದಭಗಳನ್ನು ಸಂದೇಹಿಸುತ್ತಾ, ತನ್ನ ನಿಯಂತ್ರಣದಲ್ಲಿ ಎಲ್ಲವೂ ಇರಬೇಕೆಂದು ಬಯಸಿ, ಮೋಸ, ವಂದನೆ ಕಪಟತನಗಳಿಂದ ಕೂಡಿದ ಷಡ್ಯಂತ್ರಗಳನ್ನು ಯೋಚಿಸುತ್ತಲೇ ಇರುತ್ತಾನೆ. ನಾಗೇಶ ಯಾರು, ಹೆಂಗಸು ಹೀಗೆ

ವಿಕೃತವಾಗಿ ಎಂದು ವರ್ಣಿಸಲಾರಳು, ಯಾಕೆಂದರೆ ಇಲ್ಲಿ ಮಾನವೀಯ ಸಂಬಂಧಗಳನ್ನು ಅವಳನ್ನು ಕಟ್ಟಿಹಾಕುತ್ತವೆ"

ಈ ಕಥಾಚೌಕಟ್ಟಿನಲ್ಲಿ ಕಥೆಗಾರ್ತಿ ಗೌರಮ್ಮನವರು ಮನುಷ್ಯತ್ವ ಸಂಬಂಧವನ್ನು ತೋರದ ಹಿಂದೂ ಸಮಾಜ ಮತ್ತು ಆ ಸಮಾಜದ ಗಣ್ಯ ಪುರುಷರ ಆಷಾಢಭೂತಿತನ ಹಾಗೂ ಪುರುಷ ಸಮಾಜವು ಮಹಿಳೆಯರ ಮೇಲೆ ನಡೆಸುವ ಅನ್ಯಾಯವನ್ನು ಪಾತ್ರಗಳ ಮೂಲಕ ಎಷ್ಟು ಕಟುವಾಗಿ ಮತತು ಮಾರ್ಮಿಕವಾಗಿ ಚಿತ್ರಿಸಿದ್ದಾರೆಂದರೆ, ವಿಧವೆ ಕಥಾನಾಯಕಿಯ ದುರಂತ, ಬದುಕನ್ನು ಕಂಡು ಆಕೆಯ ಮುಸಲ್ಮಾನ ಗೆಳತಿ ಸಂಬಂಧವನ್ನು ತನ್ನ ಅಣ್ಣನಲ್ಲಿ ಹೀಗೆನ್ನುತ್ತಾಳೆ

"ಅನಾಥ ಅಬಲೆಯರು ಅತ್ಯಾಚಾರಿಯ ಅತ್ಯಾಚರಕ್ಕೆ ತಾವೇ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದು ಅವರ ಜಾತಿಯ ನೀತಿಯಾದರೆ, ನಮಗೂ ಜಾತಿಯಲ್ಲಿ ಜನ್ಮಕೊಡದಿದ್ದುದಕ್ಕೆ ದೇವರನ್ನು ಎಷ್ಟು ವಂದಿಸಿದರೂ ಸ್ವಲ್ಪವೇ ಎಂದು ಹೇಗೆಯೇ ಕಥಾನಾಯಕಿಯ ದುರಂತವನ್ನು ಕಂಡು ಆಕೆಯದ್ದೇ ಸಮಾಜಕ್ಕೆ ಸೇರಿದ ಮತ್ತೊಬ್ಬಳು ಗೆಳತಿ ಹೀಗೆನ್ನುತ್ತಾಳೆ 'ನಮ್ಮವರ ಹೃದಯದಲ್ಲಿ ಜಾತಿಗಲ್ಲದೆ ದಯೆಗೆ ಎಡೆಯಿಲ್ಲ. ಅದೂ ಜಾತಿ ನಿಯಮಗಳು ಹೆಂಗಸರಿಗೆ ಮಾತ್ರ, ಗಂಡಸರು ಈ ನಿಯಮಕ್ಕೆ ಒಳಪಡಬೇಕಾಗಿಲ್ಲ. ಇದೇ ನೋಡು ನಮ್ಮ ಜಾತಿಯ ದೊಡ್ಡತನದ ಕುರುಹು"[೨೫] ಎಂದು ಹಿಂದೂ ಸಮಾಜದ ಲಿಂಗಬೇಧ ನೀತಿಯನ್ನು ಪ್ರತಿಬಿಂಬಿಸುವ ಈ ಕಥೆ ಮಾನವೀಯತೆಯನ್ನು ಮರೆತು ಧರ್ಮರಕ್ಷಣೆಯ ಬಗ್ಗೆ ಮಾತಾಡುವ ಪುರುಷ ಸಂಬಂಧಿತ ಕೇಂದ್ರಿತ ಸಮಾಜದ ಅಮಾನವೀಯ ನಡವಳಿಕೆಯನ್ನು ಹಾಗೂ ಪುರುಷನಿಂದ ಅನ್ಯಾಯಕ್ಕೊಳಗಾದ ಹೆಣ್ಣನ್ನು ಶಿಕ್ಷೆಗೊಳಪಡಿಸುವ ಸಮಾಜದ ತಾರತಮ್ಯ ನೀತಿಯನ್ನು ತೀಕ್ಷ್ಣವಾಗಿ ಖಂಡಿಸುತ್ತದೆ.

ಇಲ್ಲಿ ಗೌರಮ್ಮನವರು ಮಹಿಳಾ ಸಂಕುಲಕ್ಕಾಗುವ ಅನ್ಯಾಯವನ್ನು ಪ್ರತಿಭಟಿಸುವಾಗ "ತನ್ನವರು ತನ್ನ ಧರ್ಮ" ಎಂಬ ಪಕ್ಷಪಾನ ತೋರದಿರುಬಹುದು ಅವರೊಳಗಿನ ಅಪ್ಪಟ ಸ್ತ್ರೀ ವಿಮೋಚನಾವಾದಿ ಹಾಗೂ ಜೀವನಪರ ಪ್ರಜ್ಞೆಗೆ ಸಾಕ್ಷಿ. ಇಲ್ಲಿ ಮುಖ್ಯಭಾಗ ಗಮನಿಸುವುದು ನಮ್ಮ ಕುಟುಂಬ ವ್ಯವಸ್ಥೆಯಲ್ಲಿ ಕುಟುಂಬದಲ್ಲಿ ಸಂಬಂಧಗಳು ಬೇರೆ ನೆರೆಹೊರೆಯವರ ಸಂಬಂಧಗಳು ಬೇರೆ. ಆ ಹೆಣ್ಣು ಮಗಳು ತನ್ನ ಜೀವನವಾಗಿ ಬೇರೆ ಮನೆಯಲ್ಲಿ ವಾಸವಾದಾಗ ಅಲ್ಲಿ ಸಂಬಂಧವನ್ನು ಕುಟುಂಬ ವ್ಯವಸ್ಥೆಯನ್ನು ಪ್ರತಿನಿಧಿಸುತ್ತದೆ. ಅದೇ ಆ ಹೆಣ್ಣು ತಾನು ಯಾವ

ಕಾರಣದಿಂದ ಈ ಒಂದು ಸಂಬಂಧಕ್ಕೆ ತಾನು ಹೊರೆಯಾಗಬಾರದು ಎಂದು ಅರ್ಥ ಪ್ರಜ್ಞೆಯನ್ನು ಮತ್ತು ತಪ್ಪು ಮಾಡಿದಾಗ ಯಾವ ಸಂಬಂಧಗಳು ಅಲ್ಲಿ ಕಾಣುವುದಿಲ್ಲ.

ಜಾತಿ ಬೇಧದ ದುಷ್ಪರಿಣಾಮ, ಲಿಂಗ ತಾರತಮ್ಯ ಸೇರಿಕೊಂಡಾಗ ಉಂಟಾಗುವ ಸಮಸ್ಯೆ ಪರಿಣಾಮಕಾರಿಯಾಗಿ ನಿರೂಪಿತವಾಗಿದೆ. ಮನೆ ಧರ್ಮದ ರಕ್ಷಣೆಯಾಗಬೇಕೆಂದು ಹೇಳುವವರು ಮಾನವೀಯ ಧರ್ಮವನ್ನು ಕುರಿತು ಯೋಚಿಸುವುದಿಲ್ಲವೆಂಬುದನ್ನು ಕಥೆ ವ್ಯಂಗ್ಯವಾಗಿ ವಿಡಂಬಿಸಿದೆ.

'ವಾಣಿಯ ಸಮಸ್ಯೆ' ಕಥೆಯನ್ನು ಗಮನಿಸಿದಾಗ ಈ ಹೆಣ್ಣು ಮತ್ತು ಗಂಡು ನಡುವಿನ ಸಂಬಂಧಗಳ ಸ್ವರೂಪ ಹಾಗೂ ದಾಂಪತ್ಯ ಸಂಬಂಧವನ್ನು ಕಾಣಬಹುದು. ಅಂದರೆ ಇಲ್ಲಿ ಮುಖ್ಯವಾಗಿ ಮಾನವೀಯ ಸಂಘರ್ಷಗಳು ಅಂತರ್ಮುಖಿ ವ್ಯಕ್ತಿತ್ವ ಚಿತ್ರಗಳು ಕೌಟುಂಬಿಕ ಸಂಬಂಧಗಳು, ಗಂಡು ಹೆಣ್ಣಿನ ಸ್ನೇಹ–ಪ್ರೀತಿಗಳ ಚಿತ್ರಣ ಮಾಡುವಲ್ಲಿ ಗೌರಮ್ಮ ತಮ್ಮ ಕಾಲಕ್ಕಿಂತ ಮುಂದಿರುವುದು ಅವರ ಬರವಣಿಗೆಯ 'ವಾಣಿಯ ಸಮಸ್ಯೆ' ಯ ಕಥೆಯಲ್ಲಿ ಕಾಣಬಹುದು. 'ಗಂಡ' ಎನ್ನುವವನು ಜೀವಂತ ವ್ಯಕ್ತಿಯಾಗಿ ಪರಿಚಯಕ್ಕೆ ಬರುವ ಮೊದಲೇ ಅದರ 'ಐಡಿಯ' ವನ್ನು ತಲೆಯಲ್ಲಿ ತುಂಬುವ ಕ್ರಿಯೆಯನ್ನು ನಮ್ಮ ಸಂಸ್ಕೃತಿಯ ಕಟ್ಟಿಕೊಟ್ಟಿದೆ. ಆತ ಸಹಜ ವ್ಯಕ್ತಿಯಲ್ಲ, ಪತಿ ದೇವರು, ಪತಿದೈವ, ಪತಿಪರಮೇಶ್ವರ ಎಂಬಿತ್ಯಾದಿ ಮಾತುಗಳು ಗಂಡ ಎಂದರೆ ದೇವರು ಎಂಬ ನಿಲುವನ್ನು ಬೆಳೆಸಿದವು. ಕಾಣದ ಗಂಡನ ಆಯುಷ್ಯ ವೃದ್ಧಿಗಾಗಿ 'ಭೀಮನ ಅಮವಾಸ್ಯೆ' ಸಾವಿತ್ರಿ ವ್ರತ ಮೊದಲಾದ ವ್ರತಗಳು ಆಚರಣೆಗೆ ಬಂದವು. ದೇವರಿಲ್ಲದ ಜಗತ್ತಿನಲ್ಲಿ ಜೀವನ ಹೇಗೆ ಸಾಧ್ಯವಿಲ್ಲವೋ ಹಾಗೆ ಗಂಡನಿಲ್ಲದ ಬದುಕು ಶೂನ್ಯ ಎನ್ನುವ ಭಾವನೆ ಬೆಳೆಯಿತು.

ನಮ್ಮಲ್ಲಿ ನೀತಿಯ ಬಗ್ಗೆ ಒಂದು ಸಿದ್ಧ ಕಲ್ಪನೆ ರೂಪಿತವಾಗಿದೆ. ಅದರ ಉಲ್ಲಂಘನೆ ಮಾಡುವಾಗ ಅದರ ನಿಯಂತ್ರಣವನ್ನು ಅದೇ ಮಾಡಿಕೊಳ್ಳುತ್ತದೆ. ಹದಿಹರೆಯದ ತಾರುಣ್ಯ ವ್ಯವಸ್ಥೆಯಲ್ಲಿ ಭಾವನೆಗಳು ಸಹಜವೇ. ಅಣ್ಣ–ತಂಗಿ ಎಂದು ಸಂಬಂಧ ಗುರುತಿಸಿಕೊಂಡು 'ರಾಖಿ' ಕಟ್ಟಿಕೊಳ್ಳುವ ಪದ್ಧತಿಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದೇನೋ; ನಮ್ಮ ಸಂಸ್ಕೃತಿಯಲ್ಲಿ ಕನ್ಯತ್ವ ಪಾತಿವ್ರತ್ಯಕ್ಕೆ ಒಂದು ಉನ್ನತ ಸ್ಥಾನವನ್ನು ನೀಡಿದ್ದೇವೆ. ಇಂತಹ ಸಂಪ್ರದಾಯದ ನೀತಿಯ ಚೌಕಟ್ಟಿನಲ್ಲಿ ಬೆಳೆದ ಹಣ್ಣು ಮಕ್ಕಳು, ತಮ್ಮ ಹದಿಹರೆಯದ ಸಹಜ ಭಾವನೆಗಳು ಹತ್ತಿಕ್ಕುವಲ್ಲಿ ಹೇಗೆ ಹೋರಾಟಕ್ಕೆ ಸಂಘರ್ಷಕ್ಕೆ ಒಳಗಾದರೆಂಬುದನ್ನು ಈ ಕತೆಯು ಧ್ವನಿಸುತ್ತದೆ.

'ವಾಣಿಯ ಸಮಸ್ಯೆ' ಕತೆ ಇದಕ್ಕೆ ಪೂರಕವಾಗಿಯೇ ಬಂದರು ಅಲ್ಲಿ ಹೆಣ್ಣಿನ ಜೊತೆಗೆ ಸುಶಿಕ್ಷಿತ ನಾಗರೀಕ ವ್ಯಕ್ತಿಯೊಬ್ಬನ ಚಿತ್ರಣವೂ ಮೂಢಿಬಂದಿರುವುದು ಮುಖ್ಯ. ಹುಟ್ಟಿನಿಂದಲೇ ಅನಾಥಳಾದ ಇಂದು ಮದುವೆಯಾಗಿ ಆರು ತಿಂಗಳಲ್ಲೇ ವೈಧವ್ಯ ಪಡೆಯುತ್ತಾಳೆ. ಗಂಡನಿಂದ ದಕ್ಕಿದ ಅಲ್ಪ ಆಸ್ತಿಯಿಂದಲೇ ಸ್ವತಂತ್ರ ಬದುಕು ಸಾಗಿಸುವಷ್ಟು ಬೆಳೆದಿದ್ದಾಳೆ. ಆದರೆ ನೆರೆಮನೆಗೆ ಹೊಸದಾಗಿ ಬಂದ ರತ್ನ-ವಾಣಿಯರ ಸಂಸಾರ ಇವಳ ಶಾಂತಿಯನ್ನು ಕಲಕಿಬಿಡುತ್ತದೆ. ವಾಣಿಗೆ ಎಲ್ಲಾ ಕೆಲಸದಲ್ಲೂ ನೆರವಾಗುವ 'ಇಂದು' ಆತ್ಮೀಯಳಾಗುತ್ತಾಳೆ. ಯಾವುದರ ಬೆಲೆಯನ್ನು ಅರಿಯದ ವಾಣಿಗೆ ಎಲ್ಲವನ್ನೂ ಕೊಟ್ಟ ದೇವರು ತನ್ನ ಜೀವನವನ್ನೇಕೆ ಅಂಧಕಾರಮಯವನ್ನಾಗಿ ಮಾಡಿದ? ಎಂಬ ಪ್ರಶ್ನೆ 'ಇಂದು' ವನ್ನು ಕಾಡುತ್ತದೆ. ಅವರ ಸುಖ ಸಂಸಾರದಿಂದ ತನ್ನ ಜೀವನದಲ್ಲೂ ಒಂದು ದೊಡ್ಡ ಅಭಾವವಿದೆ ಎಂಬುದನ್ನು ಕಂಡುಕೊಳ್ಳುತ್ತಾಳೆ. ಸಮಾಜದ ಕಟ್ಟುಕಟ್ಟಳೆಗಳನ್ನೇ ದೇವರ ನಿಯಮಗಳು ಎಂದು ತಿಳಿದು ಬೆಳೆದ ಇಂದುಗೆ ರತ್ನನ ಬಗೆಗೆ ತನ್ನೊಲು ಮೂಡಿದೆ ಎಂಬುದರ ಅರಿವೇ ಭಯವನ್ನುಂಟು ಮಾಡುತ್ತದೆ.

ಆದರೂ ಅವರ ಮನವು ಇಚ್ಛೆಗೆ ವಿರೋಧವಾಗಿ ರತ್ನನ ಕಡೆ ಒಲಿಯತೊಡಗಿತು. ರತ್ನನೂ ಕೂಡ ಹೆಂಡತಿಯ ಅಸಮರ್ಥ, ಉದಾಸೀನ ಸ್ವಭಾವದೊಂದಿಗೆ ಇಂದು ವನ್ನು ತೂಗಿ ನೋಡುತ್ತಲೇ ಇಂದು ಪ್ರಿಯನಾದ. ವೃತ್ತಿಯಲ್ಲಿ ವೈದ್ಯನಾದರೂ ತನ್ನ ರೋಗಕ್ಕೆ ಮದ್ದು ತಿಳಿಯದಾದ. ಆಕಸ್ಮಿಕವಾದ ವಾಣಿಯ ತವರಿನ ಪ್ರಯಾಣ ಇವರಿಬ್ಬರ ಮಾನಸಿಕ ಹೊಯ್ದಾಟಕ್ಕೆ ಇನ್ನು ಪುಷ್ಠಿ, ಇಲ್ಲಿ ಇಂದು ಮತ್ತು ರತ್ನಳಾ ಇಬ್ಬರ ಸಂಬಂಧವನ್ನು ಹರಿಯಬಹುದು. ಆದರೆ ರತ್ನನಿಂದ ಒಂದು ಪತ್ರಕ್ಕೆ ವಾಣಿ ಮನೆ ಬಿಟ್ಟಿದ್ದೇ ಉತ್ತರವಾಯಿತು. ತವರಿನಿಂದ ಹಿಂದುರುಗಿದ ವಾಣಿಗೆ ಇಂದುವಿನ ನಿರ್ಗಮನ ಸಮಸ್ಯೆಯಾಗಿಯೇ ಉಳಿಯುತ್ತದೆ. ಇಲ್ಲಿ ಹೆಣ್ಣಿನ ನೈತಿಕ ಸಂಘರ್ಷವನ್ನು ರತ್ನ ನಲ್ಲಿ ಕಾಣುವುದಿಲ್ಲ. ಆದರೆ ಇನ್ನು ಆಕರ್ಷಿತವಾಗುವ ಹೆಣ್ಣಿಗೆ ಅದು ದೊಡ್ಡ ಹಿಂಸೆ ಎನಿಸಿ ಮನೆ ಬಿಟ್ಟು ಹೊರಟು ಹೋಗುತ್ತಾಳೆ. ನಮ್ಮ ಸಂಸ್ಕೃತಿಯಲ್ಲೆ ಗಂಡಿಗೆ ಎಲ್ಲ ರಿಯಾಯಿತಿ ಇರುವುದರಿಂದಲೇನೋ ರತ್ನ ನಲ್ಲಿ ಯಾವ ಸಂಘರ್ಷವೂ ಮೂಡಲಿಲ್ಲ.

'ವಾಣಿಯ ಸಮಸ್ಯೆ' ಗೌರಮ್ಮನ ಪ್ರಮುಖ ಕತೆಗಳಲ್ಲಿ ಒಂದು. ಅದು ಆಕೆಯ ಉತ್ತಮ ಕತೆಯೂ ಹೌದು. ಇಂದೂ ವಿಧವೆ, ಸ್ನೇಹಿತರಿಲ್ಲದ, ನೆಂಟರಿಲ್ಲದ ಬದುಕು, ಗಂಡ ಬಿಟ್ಟುಹೋದ ಒಂಟಿ ಮನೆಯಲ್ಲಿ ನಗು ಗೊತ್ತಿಲ್ಲದ ಮುಖ. ಪಕ್ಕದ ಮನೆಗೆ ಕುಟುಂಬವೊಂದು ಬರುವವರೆಗೆ ಆಕೆಯ ಬದುಕಿನಲ್ಲಿ ಅಂತಹ ವ್ಯತ್ಯಾಸ ಇರುವುದಿಲ್ಲ. ಇಲ್ಲಿ ಬರುವ ಡಾ॥ ರತ್ನನ ಹೆಂಡತಿ ವಾಣಿ,

ಸೋಮಾರಿ ಮಾತ್ರವಲ್ಲ, ಬೇಜವಾಬ್ದಾರಿ ಹೆಂಗಸು. ಆ ಕಾರಣವೋ ಏನೋ ವಾಣಿಯ ಗಂಡ ರತ್ನ ಮತ್ತು ವಿಧವೆ ಇಂದೂ ಪರಸ್ಪರ ಆಕರ್ಷಿತರಾಗುತ್ತಾರೆ. ನನಗೂ ಒಬ್ಬ ಗಂಡ ಇದ್ದಿದ್ದರೆ ಎಂಬ ಸಹಜ ಭಾವನೆ ಮತ್ತು ಅಲ್ಲಿಯವರೆಗೆ ಅನುಭವ ಇರದಂತಹ ಭಾವನೆ ಇಂದೂಗೆ ಬರತೊಡಗುತ್ತದೆ. 'ಹುಚ್ಚು ಯೋಚನೆ' ದೂರ ಮಾಡುವ ಇಂದೂನ ಮುಖದಲ್ಲಿ ಮೋಡ ಮುಚ್ಚಿದ ನಗು ಎಂದು ಗೌರಮ್ಮ ವರ್ಣಿಸುತ್ತಾರೆ.

ವಾಣಿ ಇಲ್ಲದೇ ಇದ್ದಾಗ ಹತ್ತಿರ ಬರಲು ರತ್ನ ಯತ್ನಿಸಿದಾಗ ಇಂದೂ ಹೇಳದೇ ಕೇಳದೇ ದೂರ ಹೊರಟು ಹೋಗುತ್ತಾಳೆ. "ಬೇರೊಬ್ಬಳ ಗಂಡನ ಜೊತೆ ಅನೈತಿಕ ಸಂಬಂಧ ಬೆಳೆಸಿ, ಆ ಮೂಲಕ ಒಂದು ಕುಟುಂಬದ ನೆಮ್ಮದಿ ಕೆದಕುವ ಬದುಕು ಮಾತ್ರವೇ ವಿಧವೆಯಾಗಿರುವುದು"[೨೬] ಎಂಬ ಪ್ರಶ್ನೆಯನ್ನು ಗೌರಮ್ಮ ಆ ಕತೆ ಮೂಲಕ ಕೇಳುತ್ತಾರೆ.

ಬೇರೆ ಬೇರೆ ವ್ಯಕ್ತಿತ್ವ ಹಾಗೂ ಮನಸ್ಸುಗಳ ಗಂಡು ಹೆಣ್ಣು ಒಟ್ಟಿಗೆ ಜೊತೆಗಿರುವುದು ಪ್ರಕೃತಿ ಒಂದು ಅವಶ್ಯಕತೆ ಮಾಡಿಟ್ಟಿದೆ. ಕುಟುಂಬ ಸಮಾಜದ ಒಂದು ಚಿಕ್ಕ ಘಟಕ, ಈ ಘಟಕದ ಮುಖ್ಯ ಪಾತ್ರಗಳೇ 'ಗಂಡು-ಹೆಣ್ಣು. ಈ ಘಟಕ ಚೆನ್ನಾಗಿದ್ದರೆ ಮಾತ್ರ ಸ್ವಸ್ಥ ಸಮಾಜ ನಿರ್ಮಾಣವಾಗಲು ಸಾಧ್ಯ. ಇದು ಹಿಂದಿನವರ ಆದರ್ಶ. ಆ ಆದರ್ಶದೊಂದಿಗೆ ಕುಟುಂಬ ಪದ್ಧತಿಯಲ್ಲಿ ಅಸಂಖ್ಯ ರೀತಿಯ ನೋವು, ಹಿಂಸೆ, ಘರ್ಷಣೆ ಜೊತೆಯಲ್ಲಿಯೇ ನಡೆದುಬರುತ್ತಿವೆ. ಕುಟುಂಬ ವ್ಯವಸ್ಥೆಯ ಮೇಲೆ ಪುರುಷನ ದಬ್ಬಾಳಿಕೆ ತನ್ನ ಮಾತೇ ಅಂತಿಮ ಎಂಬ ಘರ್ಷಣೆ, ಪ್ರಭುತ್ವ ನಡೆದುಬಂದಿದೆ. ಇಂತಹ ಮನೆಯೊಳಗಿನ ಹಿಂಸೆಯನ್ನು ಸದಾ ಸಹಿಸಿಕೊಂಡು ಹೆಣ್ಣು ಮಕ್ಕಳು ತಮ್ಮ ಜೀವನವನ್ನು ದಬ್ಬಾಳಿಕೆ ಮತ್ತು ಕುಟುಂಬ ವ್ಯವಸ್ಥೆಗೆ ಅವರು ಬಲಿಯಾಗಿದ್ದಾರೆ. ನಮ್ಮ ಸಮಾಜದಲ್ಲಿ ಸಂಬಂಧಗಳು ಮತ್ತು ಕುಟುಂಬ ವ್ಯವಸ್ಥೆಯಲ್ಲಿ ತುಂಬಾ ಬಿಡಿಸಿಕೊಳ್ಳಲಾಗದ ರೀತಿಯಲ್ಲಿ ನಿರ್ಮಾಣವಾಗುತ್ತವೆ. ಈ ಒಂದು ಕುಟುಂಬ ವ್ಯವಸ್ಥೆ ಎಂಬುದನ್ನು ಅವರು ಕಟ್ಟಿಕೊಂಡಿದ್ದಾರೆ.

ಗೌರಮ್ಮನವರ ಮತ್ತೊಂದು ಕತೆ 'ಪುನರ್ವಿವಾಹ' ಇಲ್ಲಿ ಸಂಬಂಧಗಳು ರೂಪಿತವಾಗುವುದಕ್ಕೆ ಅನೇಕ ಕಾರಣಗಳು ಕಾಣಬಹುದು. ಮದುವೆ, ಕಾಮ, ಪ್ರೇಮ, ಈ ಎಲ್ಲಾ ಕಾರಣಗಳಿಂದ ಸಂಬಂಧಗಳನ್ನು ಕಟ್ಟಿಕೊಡಲು ಮನುಷ್ಯ ಯಾವ ಸಂಪ್ರದಾಯಗಳನ್ನು ನೋಡದೇ, ಎಲ್ಲ ಸಂಪ್ರದಾಯಗಳು ತನ್ನಿಂದ ರೂಪಿತವಾಗಿದೆ ಎಂದು ಶೋಭಿಸಿಕೊಳ್ಳುವ ರೀತಿಯಲ್ಲಿ ಯಶಸ್ವಿಯಾಗಿದ್ದಾನೆ.

ಈ ಕತೆಯಲ್ಲಿ ಆರು ತಿಂಗಳ ಹಿಂದೆ ವಿಧುರನಾದ ಮೂವತ್ತೈದರ ಹರೆಯದ ಶ್ರೀಮಂತನೊಬ್ಬ ಮರು ಮದುವೆ ಒಲ್ಲೆ ಎನ್ನುತ್ತಿದ್ದವ-ಹದಿನೈದರ ಹರೆಯದ ಶಾಲಾಬಾಲೆಯನ್ನು ದೂರದಿಂದಲೇ ಕಂಡು ಮೋಹಗೊಳ್ಳುತ್ತಾನೆ. ಆಕೆ ತನ್ನದೇ ಊರಿನ ಬಡ ವಿಧವೆಯ ಮಗಳು ಎಂದು ತಿಳಿದೊಡನೆ. ಮದುವೆಯಾದರೆ ಆ ಬಾಲೆಯನ್ನೇ ಎಂದು ಮರುಮದುವೆಗೆ ಒಪ್ಪುತ್ತಾನೆ. ಮದುವೆಯ ನಿಶ್ಚಿತಾರ್ಥ ನಡೆಯುತ್ತದೆ. ಮದುವೆಗೆ ಇನ್ನು ನಾಲ್ಕು ತಿಂಗಳಿವೆ ಎನ್ನುವಾಗಲೇ ವಿಧುರನಿಗೆ ಆ ಬಾಲೆಯನ್ನು ಮತ್ತೆ ಮತ್ತೆ ಸನಿಹದಿಂದ ಕಾಣುವ... ಮಾತನಾಡಿಸುವ ಆತುರ, ಕಾತುರ, ಆದರೆ ಆ ಬಾಲೆಗೆ ಆತನ ಆತುರದ ತೀವ್ರತೆ ಅರ್ಥವಾಗದೇ ಆತನ ನೋಟಕ್ಕೂ... ಮಾತಿಗೂ ಕೈಯಲ್ಲಿ ಪತ್ರ ಕೊಟ್ಟು ಹೊಳೆ ದಂಡೆಗೆ ಭೇಟಿಗೆ ಆಮಂತ್ರಿಸುತ್ತಾಳೆ. ಅಲ್ಲಿ ಆತನಿಗೆ ತಾನು 'ಬಾಲವಿಧವೆ' ಎಂಬುದನ್ನು ತಿಳಿಸಿ "ನನ್ನನ್ನು ಮದುವೆಯಾಗಲು ಈಗಲೂ ಸಿದ್ಧವಿದ್ದೀರಾ?"[32] ಎಂದು ಪ್ರಶ್ನಿಸುತ್ತಾಳೆ. ಎಳೆ ತರುಣಿಯ ನೋಟ ಮಾತಿಗಾಗಿ ಸದಾ ಹಂಬಲಿಸುತ್ತಿದ್ದ ಆ ವಿಧುರನಿಗೆ ಆಕೆ 'ಬಾಲವಿಧವೆ' ಎಂದು ತಿಳಿದಾಕ್ಷಣ ಅಮಂಗಳೆಯಾಗಿ ಕಾಣಿಸುತ್ತಾಳಲ್ಲದೆ, "ನೀನು ವಿಧವೆ ಎಂದು ತಿಳಿದಿದ್ದರೆ ನಿನ್ನ ಮುಖವನ್ನೂ ಸಹ ನೋಡುತ್ತಿರಲಿಲ್ಲ, ಯಾವ ವಿಧವೆಯಾಗುವವನ್ನು ನಾನಲ್ಲ ಎಂದು ಜರೆದು 'ಸಮಾಜದಲ್ಲಿ ನಡೆಯದಿದ್ದುದ್ದನು ಮಾಡಿ ನಾನು ಪರರ ಹಾಸ್ಯಕ್ಕೆ ಈಡಾಗಬೇಕೇ? ಸಮಾಜದಲ್ಲಿ ಇಂತಹದ್ದು ನಡೆದರೆ ನಾನು ನನ್ನ ಪವಿತ್ರ ಕುಲವನ್ನು ಈ ವಿಧವಾ ವಿವಾಹದಿಂದ ಕಲುಷಿತ ಮಾಡಲು ತಯಾರಾಗಿಲ್ಲ. ಪ್ರತಿ ದಿನ ಬೆಳಗಾದೊಡನೆ ವಿಧವೆಯ ಮುಖ ನೋಡುವ ಬಯಕೆ ನನಗಿಲ್ಲ' ಎಂದು ಸಿಟ್ಟಿನಿಂದ ಕನಲಿ ನುಡಿಯುತ್ತಾನೆ.

ಆತನ ಮಾತು ಕೇಳಿದ ಬಾಲವಿಧವೆ ಆ ವಿಧುರನ ಮಾತನ್ನು ಪ್ರತಿಭಟಿಸುತ್ತಾ, ಲಿಂಗಭೇಧವುಳ್ಳ ಆ ಸಮಾಜದ ಪಕ್ಷಪಾತ ನೀತಿಯನ್ನು ಟೀಕಿಸುತ್ತಲೇ, ಏನಂದಿರೀ? ಬೆಳಗಾದೊಡನೆ ನಿಮಗೆ ವಿಧವೆಯ ಮುಖ ನೋಡುವ ಅಪೇಕ್ಷೆಯಿಲ್ಲವೇ? ನನಗೂ ಇಲ್ಲ, ಹೆಂಡತಿ ಸತ್ತು ಇನ್ನು ಆರು ತಿಂಗಳಾಗುವ ಮೊದಲೇ; ಮಗುವನ್ನು ಮರೆತು ಪುನರ್ವಿವಾಹವಾಗಬಯಸುವ ಗಂಡಸಿನ ಮುಖ ನೋಡುವ ಆಸೆ ನನಗೂ ಇಲ್ಲ, ನಿಮ್ಮಂತವರ ಮೋಹಕ್ಕೆ ಬಲಿಯಾಗಿ ಬುದ್ಧಿ ಬರುವ ಮೊದಲೇ ವಿಧವೆಯಾದ ನನ್ನ ಲಕ್ಷೋಪಲಕ್ಷ ಸಹೋದರಿಯರು ಎಂದಿನವರೆಗೆ ಸಮಾಜದ ಅನ್ಯಾಯಕ್ಕೆ ತುತ್ತಾಗುತ್ತಾರೋ ಅಂದಿನವರೆಗೆ ಹಿಂದೂ ಸಮಾಜದ ಉನ್ನತಿ ಸಾಧ್ಯವಾಗಲಾರದು ಎಂದು ತಿಳಿಯಿರಿ.

ಈ ತರಹದ ಸಾಮಾಜಿಕ ಅನ್ಯಾಯದಿಂದ ಎಷ್ಟು ಹಿಂದೂ ವಿಧವೆಯರು ನಿರ್ಲಜ್ಜತನದ ಜೀವನವನ್ನು ಅವಲಂಬಿಸಿದ್ದಾರೆ! "ಸಮಾಜದಲ್ಲಿ ಎಷ್ಟು ವೇಶ್ಯೆಯರ ಸಂಖ್ಯೆ ಹೆಚ್ಚಾಗಿದೆ? ಎಷ್ಟು ಬಾಲಹತ್ಯೆ, ಭ್ರೂಣ ಹತ್ಯೆಗಳು ನಡೆಯುತ್ತಿವೆ?! ಇದಕ್ಕೆಲ್ಲಾ ಕಾರಣರು ಯಾರು? ಅಜ್ಞಾನಿಯಾದ ಒಬ್ಬ ಚಿಕ್ಕ ಬಾಲೆಯಾ? ಅಥವಾ ಶಾಸ್ತ್ರ ಶಾಸ್ತ್ರವೆಂದು ಬಡಿದುಕೊಂಡು ಜಾತಿ ಕೆಡುತ್ತದೆಯೆಂಬ ಹೆದರಿಕೆಯಿಂದ ಎಳೆ ಮಕ್ಕಳನ್ನು ಮುದುಕರ ಕೊರಳಿಗೆ ಕಟ್ಟುವ ತಂದೆ ತಾಯಿಗಳೇ? ಅಥವಾ ನಿಮ್ಮಂಥ ಕಾಮುಕರೇ?"[೨೮] ಅಲ್ಲ, ತಪ್ಪು ನಿಮ್ಮದಲ್ಲ, ಅಸಹಾಯಕಿಯರಾದ ಚಿಕ್ಕ ಹುಡುಗಿಯರೇ ತಪ್ಪುಗಾರರು. . . ಎಂದು ಪುರುಷ ಪ್ರಧಾನ ಸಮಾಜದ ಲಿಂಗಬೇಧವುಳ್ಳ ಪಕ್ಷಪಾತೀಯ ಕಟ್ಟು ಕಟ್ಟಳೆಗಳನ್ನು ವ್ಯಂಗ್ಯವಾಗಿ ಟೀಕಿಸುತ್ತಾ. . . ಇಡೀ ಪುರುಷ ಸಂಕುಲವನ್ನೇ ಜಾಲಾಡಿಸುತ್ತಾಳೆ ಆ ಬಾಲ ವಿಧವೆ.

ಅಂತರಾಳದ ನೋವಿನಿಂದ ಹೊಮ್ಮಿದ ಆ ಬಾಲವಿಧವೆಯ ಪ್ರೌಢ ಮಾತುಗಳನ್ನು ಕೇಳಿಸಿಕೊಂಡ ಶ್ರೀಮಂತ ವಿಧುರ ಮನ ಪರಿವರ್ತನೆಯಾಗುತ್ತದೆ. ಆತನಿಗೆ ಆಕೆಯ ಮೇಲಿನ ಮೋಹವು ನಾಶವಾಗಿ, ಪಶ್ಚಾತ್ತಾಪ ಮತ್ತು ಭಕ್ತಿಯಿಂದ ಬಾಲವಿಧವೆಯ ಚರಣಗಳಿಗೆರಗಿ "ದೇವಿ ವಿಧವೆಯರ ಉದ್ಧಾರಕ್ಕಾಗಿಯೇ ನನ್ನ ಎಲ್ಲ ಜೀವನ್ನವನ್ನು ವಿನಿಯೋಗಿಸುತ್ತೇನೆ. ನನ್ನ ತನು, ಮನ, ಧನಗಳನ್ನು ಅವರ ಕಲ್ಯಾಣಕ್ಕಾಗಿ ಧಾರೆ ಎರೆಯುತ್ತೇನೆ ಎಂದು ಬೇಡಿಕೊಳ್ಳುತ್ತಾನೆ. ಬಾಲ ವಿಧವೆ ಆತನನ್ನು ಕ್ಷಮಿಸುತ್ತಾಳೆ.

ತನ್ನ ಸಮಾಜದೊಳಗೆ ಹಿಂದೂ ಬಾಲವಿಧವೆಯರು ಸನಾತನ ಸಂಪ್ರದಾಯಗಳ ಬಿಗಿಯಲ್ಲಿ ಹೀನವಾಗಿ ನರಳುತ್ತಿರುವುದನ್ನು ಸಹಿಸಿಕೊಳ್ಳಲಾಗದ ಬಂಡಾಯ ಪ್ರಜ್ಞೆಯ ಕಥೆಗಾರ್ತಿ, ಪುರುಷ ಪ್ರಧಾನ ಸಮಾಜದ ಕುಟಿಲತೆಯನ್ನು' ಹೊರಗೆಳೆದು ಪ್ರತಿಭಟಿಸುವುದಕ್ಕಾಗಿಯೇ ಶಿಕ್ಷಣ ಪಡೆದ ಆಧುನಿಕ ಮನೋಭಾವದ ಬಾಲವಿಧವೆಯ ಪಾತ್ರವನ್ನು ಸೃಷ್ಟಿಸಿ ಆ ಪಾತ್ರದ ಮೂಲಕ ಬಾಲವೈಧವ್ಯದ ಭೀಕರತೆ ಹಾಗೂ ಪುರುಷ ಕೇಂದ್ರಿತ ಸಮಾಜದ ಲಿಂಗ ಬೇಧ ನೀತಿಯ ಕಾರ್ಯವನ್ನು ಎಳೆ ಎಳೆಯಾಗಿ ಬಿಡಿಸಿ ಓದುಗರು ಮುಂದುವರಿಸುತ್ತರಾದರೂ. . . ಆ ಬಾಲವಿಧವೆಗೊಂಡು ಮರು ಮದುವೆ ಮಾಡಿಸಿ, ಆಕೆಯನ್ನು ಸಮಸ್ಯೆಯಿಂದ ಮುಕ್ತಗೊಳಿಸುವ ಎದೆಗಾರಿಕೆ ತೋರದೆ ಸನಾತನ ಧರ್ಮಪಾಲಕರನ್ನು ನೋಯಿಸದೇ ಇರಲು ತೀರ್ಮಾನಿಸಿರುವುದು ಇಲ್ಲಿ ಸ್ಪಷ್ಟವಾಗುತ್ತದೆ.

ಕೌಟುಂಬಿಕ ಸಂಬಂಧಗಳು ವ್ಯವಸ್ಥೆಯನ್ನು ಎದುರಿಸಲು ಸಾಧ್ಯವಿಲ್ಲ ಎಂಬುದನ್ನು ಗುರುತಿಸುತ್ತಾರೆ.

ಆ ಬಾಲ ವಿಧವೆಯ ಮೇಲೆ ಇರುವ ಮದುವೆ ಎಂಬ ಸಂಬಂಧಕ್ಕಿಂತ ಗಂಡಸರ ಲೈಂಗಿಕತೆಯ ಒಂದು ಸಂಬಂಧವು ಒಂದು ಅಂಗವಾಗಿ ಈ ಒಂದು ಕತೆಯಲ್ಲಿ ನಿರೂಪಿಸುತ್ತಾರೆ. ಗಂಡಸಿನ ತೀವ್ರ ಕ್ರಾಂತಿಯಿಂದ ಹುಟ್ಟಿಕೊಂಡಿದ್ದು ಅಲ್ಲ. ಮಾನವ ಜನಾಂಗದಲ್ಲಿ ಗಂಡಸು ಹುಟ್ಟಿನಿಂದಲೇ ಹೆಣ್ಣಿಗಿಂತ ಅನುಕೂಲಕರವಾಗಿ ದೈಹಿಕ ರಚನೆಯನ್ನು ಪಡೆದಿದ್ದೇ ಕಾರಣವಾಗಿ ತನ್ನನ್ನು ಉನ್ನತನೆಂದು ಸ್ಥಾಪಿಸಿಕೊಳ್ಳಲು ಸಾಧ್ಯವಾಯಿತು. ತಾನೇ ಪ್ರಧಾನ ಸೃಷ್ಟಿಯೆಂದು, ಹೆಣ್ಣು ಒಂದು ಪರಿಕರವೆಂದೂ ಹೇಳುತ್ತಾ ಅವಳನ್ನು ಗುಲಾಮಳನ್ನಾಗಿ ಅಥವಾ ಒಂದು ಗೊಂಬೆಯಾಗಿ ನಡೆಸಿಕೊಳ್ಳುವಲ್ಲಿ ಯಶಸ್ವಿಯಾದ, ತನ್ನ ಪಾತ್ರವನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶ, ಸಂದರ್ಭಗಳು ಅವಳಿಗೆಂದು ಒದಗಲೇ ಇಲ್ಲ. ಸೂತ್ರಧಾರನಾಗಿ, ನಿರ್ದೇಶಕನಾಗಿ ಗಂಡು ಹೇಳಿದಂತೆ ಮಾತ್ರವೇ ಅವಳು ಪಾತ್ರ ನಿರ್ವಹಿಸುತ್ತಿದ್ದಾಳೆ. ಬಹುಶಃ ಉತ್ಪಾದಕ ಹಂತದಲ್ಲಿ ಭಾಗವಹಿಸುವುದು ಅವಳಿಗೆ ಸಾಧ್ಯವಾಗದಿದ್ದರೆ, ಪುರುಷರ ಸಹಜೀವಿಯಾಗಿ ತನ್ನನ್ನು ಸ್ಥಾಪಿಸಿಕೊಳ್ಳಲು ಅವಳಿಗೆ ಸಾಧ್ಯವಾಗುತ್ತಿತ್ತೋ ಏನೋ? ಹಾಗಿದ್ದರೆ ಮಾನವರು ಎಂದರೆ ಸ್ತ್ರೀಯರು ಒಳಗೊಂಡ ವರ್ಗ ಎಂಬ ಸಹಜತೆಯನ್ನು ನಿರೀಕ್ಷಿಸಹಬುದಾಗಿತ್ತು. ಆದರೆ ಹಾಗಾಗಲಿಲ್ಲ. ಅವನು ಪ್ರಕೃತಿಯನ್ನು ಆಕ್ರಮಿಸಿ ಒಡೆತನ್ನವನ್ನು ಸ್ಥಾಪಿಸಿದಂತೆ ಹೆಣ್ಣನ್ನೂ ಆಕ್ರಮಿಸಿ ಒಡೆತನವನ್ನು ಸ್ಥಾಪಿಸಿದ.

ಅವಳನ್ನು ಉಪಜೀವಿಯಾಗಿ ಕಂಡುಂದಿನಿಂದಲೇ ಹೆಣ್ಣು ಗಂಡಿನ ಸಂಬಂಧಗಳ ಸಹಜತೆಯನ್ನು ನುಂಗಿಕೊಂಡು ಬೇರೆ ಮತ್ತೊಂದು ಕಥೆ 'ಪುಟ್ಟಮಿತ್ರ' ದಲ್ಲೂ ಸುಶಿಕ್ಷಿತ ಬಾಲವಿಧವೆಯೋ ಕಥಾನಾಯಕಿ, ಆ ಬಾಲವಿಧವೆಗೆ ಅತ್ತಿಗೆಯ ಅಣ್ಣನಲ್ಲಿ ಪ್ರೇಮಾಂಕುರವಾಗುತ್ತದೆ. ಆತನ ಪ್ರೀತಿಯಲ್ಲಿ, ನಡವಳಿಕೆಯಲ್ಲಿ ಕುಟಿಲತೆಯನ್ನು ಕಾಣದೆ. . . ಮೋಹಕ ಮಾತುಗಳನ್ನು ನಂಬಿ ಆತನಿಗೆ ದೇಹವನ್ನೊಪ್ಪಿಸಿ ಗರ್ಭವತಿಯಾಗುತ್ತಾಳೆ. ಮದುವೆಯಾಗುತ್ತೇನೆಂದು ಆಕೆಯನ್ನು ಬಲವಾಗಿ ನಂಬಿಸಿದ್ದಕ್ಕೆ ಆತ ಆ ಹಂತದಲ್ಲಿ ಆಕೆಯ ಕೈ ಬಿಡುತ್ತಾನೆ. ನಿರಾಧಾರಳಾದ ಆ ಹೆಣ್ಣು ಸಂಪ್ರದಾಯ ಸಮಾಜದಲ್ಲಿ ತಲೆ ಎತ್ತಿ 'ನಿಲ್ಲುವ' ಧೈರ್ಯವಿಲ್ಲದೇ ಆತ್ಮಹತ್ಯೆಗೆ ಶರಣಾಗುತ್ತಾಳೆ. ಇದು ಅವಳಲ್ಲಿ ನೋವು, ಹಿಂಸೆ, ಅಪಮಾನಗಳನ್ನು ತುಂಬಿತಾದರೆ ಅವನಲ್ಲಿ ಹೆದರಿಕೆ, ಅಪಾಯ, ಆತಂಕಗಳನ್ನು ತುಂಬಿಸಿತು. ಅವನಲ್ಲಿ ಅಧಿಕಾರವಿದೆ, ಹಾಗಾಗಿ ಅವನೇ ಹುಟ್ಟುಹಾಕಿದ ಧರ್ಮ, ಕಾನೂನು, ನಿಯಮಗಳು ಅವಳನ್ನು ನಿರ್ದಾಕ್ಷಿಣ್ಯವಾಗಿ, ಹೀನಾಯವಾಗಿ ನಡೆಸಿಕೊಳ್ಳುತ್ತವೆ. ಪುರಾಣ ಐತಿಹ್ಯಗಳನ್ನು ಮಾನವರು ಸೃಷ್ಟಿಸಿಕೊಳ್ಳತೊಡಗಿದ ಕಾಲಕ್ಕಾಗಲೇ ಪಿತೃ ಪ್ರಧಾನತೆ ಸ್ಥಿರವಾಗಿದ್ದುದು

ಖಚಿತ. ಹಾಗಾಗಿಯೇ ಹೆಣ್ಣನ್ನು ಕುರಿತು ಅವನು ಕಲ್ಪಿಸಿದ ಮಿಥ್‌ಗಳೆಲ್ಲವೂ ಅವನೊಳಗಿನ ಹೆದರಿಕೆ, ಅಪಾಯ, ಆತಂಕಗಳನ್ನು ತುಂಬಿಕೊಂಡಿವೆ. ಚರಿತ್ರೆಯುದ್ದಕ್ಕೂ ಅವಳನ್ನು ಒಳಗೊಂಡಂತೆ ಸಕಲ ಚರಾಚರವನ್ನು ತನ್ನ ನಿಯಂತ್ರಣಕ್ಕೆ ಒಳಪಡಿಸಬೇಕೆಂಬ ಅವನ ಕನಸುಗಳೇ ಅಲ್ಲಿ ಪ್ರಧಾನವಾಗಿವೆ. ಆದರೂ ತನ್ನ ಕನಸುಗಳು ಸಾಕಾರಗೊಳ್ಳಬೇಕೆಂದು ಆದರೂ ತನ್ನ ಕನಸುಗಳು ಸಾಕಾರಗೊಳ್ಳಬೇಕೆಂದರೆ ಹೆಣ್ಣಿನ ಅಸ್ತಿತ್ವದ ಅಗತ್ಯವಿದೆ.

ಇಲ್ಲಿ ಗೌರಮ್ಮನವರು ಅತೀವ ಕೌಶಲ್ಯ ಹಾಗೂ ಅದ್ಭುತ ಕಥಾತಂತ್ರವನ್ನು ಬಳಸಿ ಪುರುಷ ಕೇಂದ್ರಿತ ಸಮಾಜ ಹೆಣ್ಣಿನ ಮೇಲೆ ನಡೆಸದುವ ಕ್ರೌರ್ಯವನ್ನು ಮನಮುಟ್ಟುವಂತೆ ಚಿತ್ರಿಸಿದ್ದರಾದರೂ – ಸಾಂಪ್ರದಾಯಿಕ ಸಮಾಜದ ನೀತಿ ನಿಯಮಗಳನ್ನು ಉಲ್ಲಂಘಿಸಿ ಮನಸ್ಸಿನ ವ್ಯಾಪಾರಕ್ಕೆ ಹೊರಾಟ ಬಾಲವಿಧವೆಗೆ ಈ ಸಮಾಜದಲ್ಲಿ ಬದುಕುವ ಹಕ್ಕಿಲ್ಲ – ಎಂಬ ಸಂದೇಶ ಬರುವಂತೆ ಕಥಾನಾಯಕಿಗೆ ಆತ್ಮಹತ್ಯೆಯ ದಾರಿಯನ್ನು ತೋರಿದ್ದು, ಕಥೆಗಾರ್ತಿಗೆ ಸನಾತನ ಧರ್ಮ ನಿಯಮದ ವಿರುದ್ಧವಾಗಿ ಈಜಲು ಧೈರ್ಯವಿಲ್ಲವೇನೋ ಎಂಬ ಗುಮಾನಿ ಒಂದು ಕ್ಷಣ ಓದುಗರನ್ನು ಕಾಡುವುದು ಸಹಜ – ಇಲ್ಲಿ ಸಂಬಂಧಗಳು ಎಲ್ಲ ಯಾವ ಜೀವಿಯೂ ಜೀವಿಸಲು ಸಾಧ್ಯವಿಲ್ಲ, ಅದೇ ರೀತಿ ಒಂದು ಸಂಬಂಧಕ್ಕೂ ಒಂದು ಆತ್ಮೀಯ ರೂಪವೆಂಬುದು ರೂಪುಗೊಂಡಿರುತ್ತದೆ.

ಈ ಸಮಾಜವು ತನಗೆ ಸುಖ ಅನುಕೂಲಗಳು ಕಂಡಂತೆ ಹೆಣ್ಣಿನ ಲೈಂಗಿಕ ಬದುಕಿನ ಮೇಲೆ ನಿಯಂತ್ರಣವನ್ನು ಹೇರುತ್ತದೆ. ಸಭ್ಯ ನಾಗರೀಕ ಮೌಲ್ಯಗಳ ಹೆಸರಿನಲ್ಲಿ ವಿವಾಹದ ಮೂಲಕ ಹಿಡಿತವನ್ನು ಸಾಧಿಸುತ್ತದೆ. ಆದರೆ ವಿವಾಹದ ನಿಯಮಗಳಲ್ಲಿ ಹೆಣ್ಣನ್ನು ಮಾತ್ರವೇ ಕಟ್ಟಿಹಾಕಿ ಪುರುಷರಿಗೆ ಆ ನಿಯಮಗಳನ್ನು ಮೀರುವ ಸೌಲಭ್ಯಗಳನ್ನು ಕಲ್ಪಿಸುತ್ತದೆ. ಹಲವು ಸಾಮಾಜಿಕ ಸಂಕಷ್ಟಗಳಲ್ಲಿ ಸಿಲುಕಿದ ನಿರ್ಗತಿಕ "ಅನಾಥ ಹೆಂಗಸರು ಪುರುಷರ ಲೈಂಗಿಕ ಸುಖಕ್ಕೆ ಮುಕ್ತವಾಗಿ ಸಿಗುವಂತಾಗುವುದು ಒಂದು ವಿಧ"[೨೯].

ಇದಕ್ಕಿಂತಲೂ ಅಮಾನವೀಯವಾದ ವಿಧಾನದಲ್ಲಿ ಮಹಿಳೆಯರು ದೇವರು, ಧರ್ಮ, ಜಾತಿ ಪರಂಪರೆಗಳ ಹೆಸರಿನಲ್ಲಿ ಪುರುಷರ ವಿವಾಹ ಬಾಹಿರ ಲೈಂಗಿಕ ಸುಖಗಳಿಗೆ ತೆತ್ತುಕೊಳ್ಳಬೇಕಾಗುತ್ತದೆ.

ಈ ಮಹಿಳೆಯರು ಸಂಗೀತ, ಸಂಗೀತ ನೃತ್ಯಗಳು ಕಲಾಭಿವ್ಯಕ್ತಿಯಾಗಿ, ಬಿಡುಗಡೆಯ ಮಾಧ್ಯಮವಾಗಿ ಉಳಿಯಲಾರದೆ ಅವರನ್ನು ಹಲವು ಸಾಮಾಜಿಕ ಬಾಂಧವ್ಯಗಳಲ್ಲಿ ಸಿಲುಕಿಸುವ

ನೆಪಗಳಾಗುತ್ತವೆ. ಅವರಲ್ಲಿ ಕೆಲವರಿಗೆ ಈ ಸೇವೆಯ ಮೆಚ್ಚುಗೆಯಾಗಿ ಐಹಿಕ ಸುಖ ಸಂಪತ್ತುಗಳು ದೊರೆಯಬಹುದು. ಕೆಲವೊಮ್ಮೆ 'ಸಾಮಾಜಿಕ ಮನ್ನಣೆ' ಯ ಭ್ರಮೆಯು ಒದಗಬಹುದು. ಆದರೆ ಇವರ ಒಟ್ಟಾರೆ ಬದುಕು ವಿವಾಹ ಬಾಹಿರವಾಗಿ ಸುಖಗಳನ್ನು ಅರಸುವ ಪುರುಷರಿಗೆ ಮೀಸಲಾಗಿಯೇ ಜರುಗುತ್ತದೆ. ಅವರು ಸಾಮಾಜಿಕ ಗೌರವ ಮನ್ನಣೆಗಳಿಂದಲೂ ವಂಚಿತವಾಗಿ ಉಳಿಯಬೇಕಾಗುತ್ತದೆ ಎಂಬುದನ್ನು ಪ್ರತಿಪಾದಿಸುತ್ತದೆ.

'ಪುಟ್ಟ ಚಿತ್ರ' ಕತೆಯಲ್ಲಿ ಬಾಲ ವಿಧವೆ ಬೆಳೆದು ದೊಡ್ಡವಳಾದ ಮೇಲೆ ರಘುವಿನೊಡನೆ ಅನೈತಿಕ ಸಂಬಂಧ ಹೊಂದಿದ್ದಳು. ಹೋದವ ಬರುವವರೆಗೆ ಕಾಯುವಷ್ಟು ತಾಳ್ಮೆ ಆಕೆಗೆ ಇರಲಿಲ್ಲ. ಮನೆಬಿಟ್ಟು ಹೋಗುತ್ತಾಳೆ. ಗರ್ಭಿಣಿಯಾಗಿರುವುದರಿಂದ ಆತ್ಮಹತ್ಯೆ ಮಾಡಿಕೊಂಡು ಸಾಯುತ್ತಾಳೆ. ಆಸ್ಪತ್ರೆಯವರು ಹೆಣವನ್ನು ಗುರುತಿಸುತ್ತಾರೆ.

ಮಹಿಳೆಯರ ಬದುಕಿನ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಪರಿಹಾರ ಕಾರ್ಯಕ್ರಮಗಳನ್ನು ರೂಪಿಸಲು ಹೊರಟ ಹಲವು ಚಾರಿತ್ರಿಕ ಸಂದರ್ಭಗಳೇನೋ ಇವೆ. ಆದರೆ ಈ ಕಾರ್ಯಕ್ರಮಗಳ ಧ್ಯೇಯೋದ್ಧೇಶ ಹಾಗೂ ಪರಿಣಾಮಗಳನ್ನು ಕುರಿತೇ ಪ್ರತ್ಯೇಕವಾಗಿ ಅಧ್ಯಯನ ಮಾಡುವ ಅಗತ್ಯ ಎಷ್ಟೊಂದಿದೆ ಎಂಬುದನ್ನು ವಿದ್ವಾಂಸರು ಗುರುತಿಸತೊಡಗಿದ್ದಾರೆ. ಈ ಹಿಂದೆ ಸುಧಾರಣಾವಾದಿಗಳು ಕಲಾವಿದೆಯರಾಗಿಯೂ, ವೇಶ್ಯೆಯರಾಗಿ, ದೇವದಾಸಿಯರಾಗಿ ಇನ್ನೂ ಹಲವು ಹೆಸರುಗಳಲ್ಲಿ ಸಾಮಾಜಿಕ ಬಂಧನಗಳಲ್ಲಿ ಸಿಲುಕಿದ್ದ ಮಹಿಳಾ ಸಮುದಾಯದ ಉದ್ಧಾರಕ್ಕೆ ತೊಡಗಿದ್ದಾರೆ. ಆದರೆ ಈ ಸುಧಾರಕರು ಹೆಣ್ಣು ಮಕ್ಕಳು ಸಮಸ್ಯೆಗಳನ್ನು ಆ ಕಾಲದಿಂದಲೇ ಗೌರಮ್ಮನವರು ಅವರ ಸೂಕ್ಷ್ಮ ಜ್ಞಾನದಿಂದ ಕತೆಗಳ ಮೂಲಕ ಸಮಾಜಕ್ಕೆ ಪರಿಚಯ ಮಾಡಿಕೊಡುವ ಸಣ್ಣ ಪ್ರಯತ್ನ ಮಾಡಿದ್ದಾರೆ.

ಅದರ ಮೇಲೆ ಉದಾಹರಿಸಿದ ಕತೆಗಳ ನಿರ್ವಹಣೆಯ ಸಂದರ್ಭದಲ್ಲಿ ಗೌರಮ್ಮನವರು ಸಾಂಪ್ರದಾಯಿಕ ಸಮಾಜಕ್ಕೆ ತೀರ ಒಪ್ಪಿತವಾಗದ 'ವಿಧವಾ ವಿವಾಹ' ಗಳನ್ನು ನಿರ್ವಹಿಸಲು ಹಿಂಜರಿದು, ಆ ಸಮಸ್ಯೆಯನ್ನು ಯಥಾಸ್ಥಿತಿಯಲ್ಲಿಟ್ಟಿದ್ದು, ಹೊಸ ಕಾಲವನ್ನು ಗಮನಿಸಿದರೆ ಅಂದಿನ ಸಮಾಜದಲ್ಲಿದ್ದ ಲಿಂಗಭೇದ ನೀತಿಯನ್ನು ತಮ್ಮ ಕಥಾಪಾತ್ರಗಳ ಮೂಲಕ ಇಷ್ಟು ನೇರ ಮತ್ತು ವ್ಯಂಗ್ಯವಾಗಿ ಟೀಕಿಸಿ, ಆಕ್ರೋಶ, ಆವೇಶ ವ್ಯಕ್ತಪಡಿಸಿದ ಬಂಡಾಯ ಕಥನಗಾರ್ತಿ ಆ ಕಾಲಘಟ್ಟದಲ್ಲಿ ಇನ್ನೊಬ್ಬರಿಲ್ಲ ಎಂಬುದು ಕೂಡಾ ಅಷ್ಟೇ ನಿಜವಾಗಿದೆ.

ಬಾಲ ವಿಧವೆಯರ ಮೇಲೆ ನಡೆಯುತ್ತಿದ್ದ ದೌರ್ಜನ್ಯಗಳ ಬಗ್ಗೆ ಒಂದು 'ಪುಟ್ಟ ಚಿತ್ರಕಥೆ'ಯ ಮೂಲಕ ತಿಳಿಸಿದ್ದಾರೆ. ಈ ಕತೆ ನಾಲ್ಕು ಜನರ ಮಧ್ಯ ಓಡಾಡುವ ಪಾತ್ರಗಳ ಮೂಲಕ ತಿಳಿಯುತ್ತದೆ. ಗೌರಮ್ಮನವರು ತಮ್ಮ ಕಾಲಘಟ್ಟದಲ್ಲಿ ನಡೆಯುತ್ತಿದ್ದ ಬಾಲ್ಯವಿವಾಹ, ಬಾಲ ವಿಧವೆಯರು, ಅವರ ಮೇಲೆ ನಡೆಯುತ್ತಿದ್ದ ಕೌಟುಂಬಿಕ ದೌರ್ಜನ್ಯಗಳು ನಮ್ಮ ಮುಂದೆ ಸಾಕ್ಷ್ಯಚಿತ್ರಗಳಾಗಿ ನಿಲ್ಲುತ್ತವೆ. ಅತ್ತಿಗೆಯ ಅಣ್ಣನೇ ವಿಧವೆಯಾದ ಶಾಂತಾಳ ಮೇಲೆ ದೌರ್ಜನ್ಯವೆಸಗುವ ಮೂಲಕ ಸಮಸ್ಯೆಗೆ ಕಾರಣವಾಗುತ್ತಾನೆ. ಶಾಂತೆಯ ಮೂಲಕವೇ ಈ ಸಮಾಜದ ತಾರತಮ್ಯ ನೀತಿಯನ್ನು ಗೌರಮ್ಮ ತಿಳಿಸುವ ಪ್ರಯತ್ನ ಮಾಡಿದ್ದಾಳೆ. ತಾನು ಮಾಡಿಲ್ಲದ ತಪ್ಪಿಗೆ ಹೆಣ್ಣೇ ಕಾರಣಳಾಗುವ, ಶಿಕ್ಷೆ ಅನುಭವಿಸುವ, ಅದರ ಪ್ರತಿಫಲ ಹೊಂದುವುದು ಎಲ್ಲದಕ್ಕೂ ಹೆಣ್ಣನ್ನೇ ಕಾರಣೀಕರಿಸುವ ಈ ಸಮಾಜದ ನೀತಿಯನ್ನು ಸಣ್ಣಗೆ ಪ್ರತಿಭಟಿಸುವ ವಿಧಾನವಲ್ಲದೇ "ಆಚಾರದ ಅಧಿಕಾರ ಅಬಲೆಯರ ಮೇಲೆಯೇ?"[೨೦] ಎಂಬ ಮಾತೇ ಅದಕ್ಕೆ ಸಾಕ್ಷಿಯಾಗಿದೆ. ತನ್ನನ್ನು ಬೇರೆ ಮಾಡಿದ ವ್ಯಕ್ತಿಗೆ ದೈನ್ಯದಿಂದ ಬೇಡಿಕೊಳ್ಳುವ ಶಾಂತೆಯ ಮನಸ್ಥಿತಿ ಆಕೆಯದು ಮಾತ್ರವಲ್ಲ. ಅಂದಿನ ವಿಧವೆಯರೆಲ್ಲರ ಬಾಳಿನ ಚಿತ್ರಣವೂ ಆಗಿದೆ.

ಗೌರಮ್ಮನವರ ಕಥನ ಸಾಹಿತ್ಯವನ್ನು ಅವಲೋಕಿಸಿದಾಗ ಪ್ರತಿಯೊಂದು ಕಥೆಯ ಪರಂಪರೆಯನ್ನು ಬಿಡದೆ ಪರಂಪರೆಯ ಆದಿಯಲ್ಲೇ ಅವರ ಕಥಾಸಾಹಿತ್ಯವು ರೂಪುಗೊಳ್ಳುತ್ತಾ, ಸಂಬಂಧಗಳ ಚಿತ್ರವನ್ನು ಗಟ್ಟಿಗೊಳಿಸುತ್ತಾ ಸಾಗುತ್ತದೆ. ಅವರ ಕತೆಗಳು ವಿಶ್ವಾಸ ಗಳಿಸುವ ಹಾದಿಯಲ್ಲಿ ಸಾಗುತ್ತವೆ. ವಿಶ್ವಾಸ ಗಳಿಸುವುದು ಸುಲಭವಾದ ಮಾತಲ್ಲ. ಹಾಗೆಂದು ಅದು ಕಷ್ಟಸಾಧ್ಯವಾದುದೂ ಅಲ್ಲ. ಯಾಕೆಂದರೆ, ಈ 'ಶ್ವಾಸ ವಿಶ್ವಾಸಗಳ ಸಂಬಂಧವಿದೆಯಲ್ಲ ಅದುವೇ ಬದುಕು' 'ಜೀವನ ಎಂದರೆ ಒಂದು ಕಲೆ' ಎಂದು ತಿಳಿದವರು ಹೇಳಿದ್ದಾರೆ. ನಮ್ಮ ಬದುಕು ಕಲೆಯಂತೆ ಸುಂದರವಾಗಿರಬೇಕಾದರೆ ಅದಕ್ಕೊಂದಿಷ್ಟು ಸಂಕಲ್ಪ; ಮತ್ತೊಂದಿಷ್ಟು ಸಾಧನೆ ಬೇಕು,

ಇವೆರಡೂ ಜೊತೆಯಾದಾಗ ಇನ್ನೊಬ್ಬರ ವಿಶ್ವಾಸ ಗಳಿಸಲು ಸಾಧ್ಯವಾದಾಗ ಸಂಬಂಧಗಳು ಎನ್ನುವುದು ಪರಿಮಳಯುಕ್ತ ತಂಗಾಳಿಯಂತೆ ಅಪ್ಯಾಯಮಾನವಾಗುತ್ತದೆ, ಆಪ್ತವಾಗುತ್ತದೆ. ಇಂದು ನಾವು ಸುತ್ತಮುತ್ತ ಕಾಣುತ್ತಿರುವುದು ಹದಗೆಡುತ್ತಿರುವ ಸಂಬಂಧಗಳನ್ನು. ಅದು ದೇಶ ದೇಶದೊಳಗೆ, ಜಾತಿ–ಜಾತಿಗಳೊಳಗೆ, ಬಂಧು–ಬಂಧುಗಳೊಳಗೆ, ಕೊನೆಗೆ ಮನೆ–ಮನೆಗಳಲ್ಲಿ, ಮನೆಮಂದಿಯೊಳಗೆ, ಸಂಬಂಧಗಳ ಸಪಿ ಬೆಸುಗೆಗೆ ಬೇಕಾದುದೇನು? ಭಾವನೆಗಳಲ್ಲೇ ನೋಡಬಹುದು. ಇಂದಿನ ಕಾಲ ಭಾವುಕತೆಯನ್ನು ಮೀರಿ ಬೆಳೆಯುತ್ತಿರುವ ಬುದ್ಧಿವಂತಿಕೆಯ ಕಾಲವಾಗಿದೆ. ಅದೇ ಭಾವುಕತೆ ತರ್ಕ

ಮಾಡುವ ವಿವೇಚನಾ ಶಕ್ತಿಯನ್ನು ಕಳೆದುಕೊಂಡು ತ್ಯಾಗ, ಬಲಿದಾನ, ಆತ್ಮಹತ್ಯೆ ಎನ್ನುವ ನಂಜಿಕೆಗಳಿಗೆ ಶರಣಾಗುತ್ತದೆ. ಹೀಗಾಗಿದೆ ಎಂಬ ವಾಸ್ತವವನ್ನು ಅರಿತರೆ ಇದನ್ನು ಬದಲಾಯಿಸುವುದು ಮತ್ತೆ ಮಧುರ ಸಂಬಂಧಗಳನ್ನು ಬೆಸೆಯುವುದು ಅತಿಮುಖ್ಯವೆನಿಸಿದೆ.

ಒಂದು ದೇಶದ ರಾಜಕೀಯ ನೀತಿಯೊಳಗೆ ದ್ವೇಷಗಳಿಗೆ ಜನಾಂಗಿಕ, ಧಾರ್ಮಿಕ, ರಾಜಕೀಯ ಎಂದು ಸಾಕಷ್ಟು ನೆಲೆಯ ದಾರಿಗಳನ್ನು ಶೋಧಿಸುವುದು, ಅದೇ ಜನಾಂಗ, ಧರ್ಮ, ರಾಜಕೀಯ ಚರಿತ್ರೆಗಳಲ್ಲಿ ಕುಟುಂಬ ವ್ಯವಸ್ಥೆಯಲ್ಲಿ ಸಂಬಂಧಗಳ ಮಧುರ ಬಾಂಧವ್ಯಕ್ಕೆ ಉದಾಹರಣೆಗಳಾಗಬಹುದಾದ ಸಾಕಷ್ಟು ಎಳೆಗಳಿವೆ, ಕೊಂಡಿಗಳಿವೆ, ಅವುಗಳನ್ನು ಯಾಕೆ ಶೋಧಿಸಬಾರದು? ದಿನಾ ಬೆಳಗಾದರೆ ಪತ್ರಿಕೆ, ರೇಡಿಯೋ, ಟಿ.ವಿ.ಗಳಲ್ಲಿ ಓದುವ ಕೇಳುವ ನೋಡುವ ಸುದ್ಧಿಗಳಲ್ಲಿ ಬಹುತೇಕ ದ್ವೇಷದ ಬಿರುಕುಗಳನ್ನೇ ವೈಭವೀಕರಿಸುವ ಸುದ್ಧಿಗಳು, ಬದಲಿಗೆ ಅವು ಜಾಗತಿಕ ನೆಲೆಯಲ್ಲಿ ಮನುಕುಲದ ಏಕತೆ ಸಾರುವ ಪ್ರೀತಿಯ ಸಂಬಂಧದ ಬೆಸುಗೆಗಳು ಈ ಎಲ್ಲಾ ಅಂಶಗಳು ಗೌರಮ್ಮನವರ ಕಥಾಸಾಹಿತ್ಯದ ಒಡಲಿನಲ್ಲಿ ಮೂಡಿಬಂದಿದೆ. ಕುಟುಂಬದ ಮುಂದಾಳತ್ವವನ್ನು ಹೆಣ್ಣು ಹೊರುವಂತಾದರೆ ಸ್ವಸ್ಥ ಸಮಾಜ ನಿರ್ಮಾಣವಾಗುತ್ತದೆ.

<u>ಕೊನೆ ಟಿಪ್ಪಣಿ</u>

೨೩) ಹೆಚ್.ನಾಗವೇಣಿ : ಕೊಡಗಿನ ಗೌರಮ್ಮ , ಪುಟ: 52 ಪ್ರಕಟಣೆ: ಸಾಹಿತ್ಯ ಅಕಾಡೆಮಿ, ಪ್ರಕಟ : 2012

೨೪) ಎಸ್.ಎಸ್. ಶ್ರೀಮತಿ, ಹೆಣ್ಣು–ಹೆಂಗಸು: ಪ್ರಕಾಶನ: ಬ್ಯಾಲದಕೆರೆ ಪ್ರಕಾಶನ, ಪ್ರಕಟ:2004, ಪುಟ–12

೨೫) ಹೆಚ್.ನಾಗವೇಣಿ : ಕೊಡಗಿನ ಗೌರಮ್ಮ , ಪುಟ: 52 ಪ್ರಕಟಣೆ: ಸಾಹಿತ್ಯ ಅಕಾಡೆಮಿ, ಪ್ರಕಟ : 2012

೨೬) ಡಾ॥ ಕಾಳೇಗೌಡ ನಾಗವಾರ; ಜೀವನ ಪ್ರೀತಿ, ಪುಟ:244, ಪ್ರಕಾಶನ: ಮಾನಸ ಗಂಗೋತ್ರಿ, ಪ್ರಕಟ: 2002

೨೭) ದಿ. ಕೊಡಗಿನ ಗೌರಮ್ಮನ; ಸಮಗ್ರ ಸಣ್ಣ ಕಥೆಗಳು– ಪುಟ–116, ಪ್ರಕಾಶನ: ಅನನ್ಯ ಪ್ರಕಾಶನ, ಪ್ರಕಟಣೆ: 2008

೨೮) ಹೆಚ್.ನಾಗವೇಣಿ : ಕೊಡಗಿನ ಗೌರಮ್ಮ , ಪುಟ: 53, ಪ್ರಕಟಣೆ: ಸಾಹಿತ್ಯ ಅಕಾಡೆಮಿ, ಪ್ರಕಟ : 2012

೨೯) ಎಸ್.ಎಸ್.ಶ್ರೀಮತಿ – ಹೆಣ್ಣು–ಹೆಂಗಸು;, ಪ್ರಕಾಶನ: ಬ್ಯಾಲದಕೆರೆ ಪ್ರಕಾಶನ, ಪ್ರಕಟ: 2004, ಪುಟ : 37

೩೦) ಕೊಡಗಿನ ಗೌರಮ್ಮ ಮತ್ತು ತ್ರಿವೇಣಿ ಅವರ ಸಾಹಿತ್ಯ ಅವಲೋಕನ ಸಂ: ಶಾರದಾ ಮಳ್ಳೂರ, ಕರ್ನಾಟಕ ಸಾಹಿತ್ಯ ಅಕಾಡೆಮಿ, ವರ್ಷ: 2001

## ಅಧ್ಯಾಯ – 5

**ಪರಂಪರೆ ಮತ್ತು "ಆಧುನಿಕ ಮುಖಾಮುಖಿ" :**

ಕ್ರೋಬರ್ ಪ್ರಕಾರ ಸಂಸ್ಕೃತಿಯನ್ನುವುದು ನಾವು ಕಲಿಕೆ ಮತ್ತು ಪ್ರಸಾರ ಮಾಡುವ ಸ್ವಭಾವ ತಂತ್ರವಿಧಾನ ಮೌಲ್ಯಗಳನ್ನು ಮೊತ್ತವಾಗದೆ ಅದರ ಪ್ರಕಾರ ಸಂಸ್ಕೃತಿಯ ವಂಶ ಪಾರಂಪರ್ಯದಿಂದ ಬರುವುದಿಲ್ಲ. ಮನುಷ್ಯನ ಕಲಿಕೆಯಿಂದ ರೂಪುಗೊಳ್ಳುತ್ತದೆ. ನಿರಂತರ ಕಲಿಕೆಯೇ ಸಂಸ್ಕೃತಿಯನ್ನು ಚಲನಶೀಲವಾಗಿಡುತ್ತದೆ. ಈ ಕಲಿಕೆಯಲ್ಲೇ ಸಂಸ್ಕೃತಿಯು ಪರಂಪರೆ ಆಧುನಿಕತೆ ಎಂಬ ಕವಲನ್ನು ಪಡೆಯುತ್ತದೆ. "ಹೀಗಾಗಿ ಇದು ಸಂಸ್ಕೃತಿ ಎಂಬುದು ಸಾರ್ವಕಾಲಿಕ ಸತ್ಯವಾದ್ರಿಂದ ಪರಂಪರೆ ಮತ್ತು ಆಧುನಿಕತೆ ಎರಡರಲ್ಲೂ ಪರಿಸುತ್ತಿರುತ್ತದೆ"[೩೧]. ಒಂದೊಂದು ಕಾಲದ, ಒಂದೊಂದು ಪ್ರದೇಶದ ಸಂಸ್ಕೃತಿಯಲ್ಲಿ ವ್ಯತ್ಯಾಸಗಳಿರುವುದು ಸಹಜ. ಹಿಂದಿನಂತೆ ಈಗ ಇಲ್ಲಿ ಎಂಬ ಕಾರಣದಿಂದ ಸಂಸ್ಕೃತಿಯೋ ಇಲ್ಲಿ ಎಂದು ಹೇಳುವಂತಿಲ್ಲ. ಅಂದಿನದೂ ಸಂಸ್ಕೃತಿ ಇಂದಿನದೂ ಸಂಸ್ಕೃತಿ, ಅವುಗಳ ಸ್ವಭಾವ ಮತ್ತು ಸ್ವರೂಪದಲ್ಲಿ ಅಂತರವಿರಬಹುದು. ಮೌಲ್ಯಗಳು ವ್ಯತ್ಯಾಸಗೊಂಡಿರಬಹುದು. "ಆದರೆ ಆಧುನಿಕತೆ ಬಂದ ತಕ್ಷಣ ಪರಂಪರೆ ನಾಶವಾದಂತೆ ಅಲ್ಲ"[೩೨], ಹಾಗೆಯೇ ಆಧುನಿಕತೆ ಬಂದ ತಕ್ಷಣ ಪರಂಪರೆಯೂ ವಿರೋಧಿಯೂ ಅಲ್ಲ, ಅವೆರಡು ಸಾಮರಸ್ಯದಿಂದ ನಡೆಯುವುದು ಸಂಸ್ಕೃತಿಗೆ ಹಿರಿಮೆಯಾಗಿದೆ.

ಪರಂಪರೆ ಮತ್ತು ಆಧುನಿಕತೆ ಜೊತೆ ಮುಖಾಮುಖಿ ಆಗುವುದರ ಮೂಲಕ ಗೌರಮ್ಮ ತಮ್ಮ ಕಥೆಗಳು ಬಹುಪಾಲು ಕೃತಿಗಳ ವಿನ್ಯಾಸ ರೂಪಿಸಿಕೊಳ್ಳುತ್ತಾರೆ. ಇದರಿಂದಾಗಿ ಅವರು ಪ್ರಮುಖವಾಗಿ ಎರಡು ಬಗೆಯ ಅನುಕೂಲಗಳನ್ನು ಸಾಧಿಸುತ್ತಾರೆ. ಮೊದಲನೆಯದಾಗಿ ಗಟ್ಟಿಯಾದ ಕಥಾವಸ್ತುವೊಂದು ಅವರ ಕೃತಿಗೆ ದೊರಕುತ್ತದೆ. ಜೊತೆಗೆ ಅದು ಒಳಗೊಳ್ಳುವ ಅರ್ಥಪರಂಪರೆ ವಸ್ತುವಿಗೆ ಬಂದು ಸೂಕ್ಷ್ಮ ಹಿನ್ನೆಲೆಯನ್ನು ಒದಗಿಸಿ ಕೊಡುತ್ತದೆ. ಎರಡನೆಯದಾಗಿ ಗೌರಮ್ಮ

ಪರಂಪರೆಯನ್ನು ವಾಸ್ತವ ಅಂಶಗಳನ್ನು ಮುರಿದುಕಟ್ಟುವುದರ ಮೂಲಕ ಸಮಕಾಲೀನ ಸಮಸ್ಯೆಗಳನ್ನು ವಿಶ್ಲೇಷಿಸುತ್ತಾರೆ. ಪರಂಪರೆ ಮತ್ತು ಸ್ಥಿತಿ, ಈ ಮುಖಾಮುಖಿಯ ಮೂಲಕ ಗೌರಮ್ಮ ಕಥೆಗಳ ಸಂವಿಧಾನವನ್ನು ರೂಪಿಸಿಕೊಳ್ಳುತ್ತಾರೆ.

ಪ್ರಗತಿಪರ ವಿಚಾರ ಹೊಂದಿದ್ದ ನಿತ್ಯ ಟೆನ್ನಿಸ್ ಆಡುತ್ತಿದ್ದ ಹೊಳೆಯಲ್ಲಿ ಪ್ರತಿನಿತ್ಯ ಈಜುಹೊಡೆಯುತ್ತಿದ್ದ, ಈ ಲೇಖಕಿ ವಿಶಿಷ್ಠವಾಗಿ ತಾನು ಬಾಳುವ ಕಾಲಕ್ಕಿಂತ ವಿಚಾರದಲ್ಲಿ ಮುಂದಿದ್ದವರು ಹೋರಾಟದ ಅನುಭವ ಗಾಂಧಿತತ್ವ, "ವೈವಿದ್ಯ, ಜಾತಿ, ತಾರತಮ್ಯ, ಧರ್ಮಾಂತರದ ಸಮಸ್ಯೆಗಳ ಅವಲೋಕನ ಇವುಗಳನ್ನು ತುಂಬಾ ಭಾವನಾತ್ಮಕವಾಗಿ ಏರಿಸದೇ, ಸಪ್ಪೆಯಾಗದೆ ನಿರೂಪವಾಗದಂತೆ ಕಟ್ಟಿಕೊಟ್ಟ ರೀತಿ ಅನನ್ಯವಾಗಿದೆ."[೩೩]

ಇಪ್ಪತ್ತನೆಯ ಶತಮಾನದ ಈ ಮೂವತ್ತರ ದಶಕದ ಕಾಲ ಕೌಟುಂಬಿಕ ಸಮಸ್ಯೆಗಳನ್ನು ಸಾಮಾಜಿಕ ಪರಿವರ್ತನೆಯನ್ನು ನಾಜೂಕಾಗಿ ಸಣ್ಣಕಥೆಗಳ ಮೂಲಕ ಕಟ್ಟಿಕೊಂಡಿದ್ದರು. ಕಥಾರೂಪದಲ್ಲಿ ಅಂದಿನ ಸಂಸ್ಕೃತಿಯ ಅನಾವರಣ ಸಾಮಾಜಿಕ-ಸ್ಥಿತಿ-ಗತಿಗಳ, ಹೆಣ್ಣಿನ, ತಲ್ಲಣಗಳು ಬರೆಯಲ್ಪಟ್ಟಿವು, ಶ್ಯಾಮಲಾ ಬೆಳಗಾಂವಕರ್, ಸರಸ್ವತಿ ಬಾಯಿರಾಜವಂಡೆ ಮತ್ತು ಕೊಡಗಿನ ಗೌರಮ್ಮನವರು ಕಥಾ ಸಾಹಿತ್ಯದ ಮೊದಲ ತಲೆಮಾರಿನ ಪ್ರಮುಖ ಲೇಖಕಿಯರಾಗಿದ್ದಾರೆ, ಅವರ ಕಾಲಘಟ್ಟವನ್ನು ಕೇಂದ್ರವಾಗಿಟ್ಟುಕೊಂಡು ಅಭ್ಯಾಸಿಸುವುದು ಇಂದಿನ ಆಧುನಿಕತೆಯ ಪೀಳಿಗೆಯ ಅವಶ್ಯಕತೆ ಎನಿಸಿತ್ತು. ಗೌರಮ್ಮನವರು ಸಮಗ್ರ ಕಥೆಗಳ ತಮ್ಮ ಆಯುಷ್ಯದ ಅಂತ್ಯದ ಅವಧಿಯಲ್ಲೇ ಕಥೆಗಳನ್ನು ಬರೆದದ್ದು, ಅವರನ್ನು ತೊಡಗಿಕೊಂಡ ಪರಿಯವನ್ನು ಬಿಂಬಿಸುತ್ತದೆ. ಅವರ ಸಾಮಾಜಿಕ ಸ್ಥಿತ್ಯಂತರಗಳು ಮಾನಸಿಕ ತಲ್ಲಣಗಳನ್ನು ಮನೋವೈಜ್ಞಾನಿಕ ನೆಲೆಯಲ್ಲಿ ಉದ್ಧೇಶಪೂರ್ವಕವಾಗಿ ಕಟ್ಟಿಕೊಟ್ಟಿರುವಂತೆ ಎಲ್ಲವೂ ಅನ್ನಿಸದ ಹಾಗೆ ಸಹಜವಾಗಿ ನೀಡಿದ್ದಾರೆ.

ಕಳೆದ ಶತಮಾನದ ಆರಂಭದ ದಶಕದಿಂದ ಅಕ್ಷರಭಿವ್ಯಕ್ತಿಯ ಹೊಸ ಪ್ರಪಂಚವನ್ನು ಪ್ರವೇಶಿಸಿರುವ ಆಧುನಿಕ ಕನ್ನಡ ಲೇಖಕಿಯ ಸಾಹಿತ್ಯಾಭಿವ್ಯಕ್ತಿಗೆ ಶತಮಾನದ ಚರಿತ್ರೆ ಬರೆಯುತ್ತಿರುವ ಈ ಹೊತ್ತಿನಲ್ಲಿ ಮಹಿಳಾ ಸಾಹಿತ್ಯ ಸೃಜನಶೀಲತೆಗೆ ರೂಪಕೊಟ್ಟ ಮೊದಲ ಹೆಜ್ಜೆಗಳ ಅನುಸಂಧಾನವು ವರ್ತಮಾನದ ಸವಲುಗಳನ್ನು ನಿಚ್ಚಳಗೊಳಿಸಬಲ್ಲದು. ಪುರುಷಕೇಂದ್ರಿತ ಪ್ರಧಾನ ಸಂಸ್ಕೃತಿಯ ಜೀವವಿರೋಧಿ ಜಟಿಲ ಹೆಣೆಗೆಯಲ್ಲಿ ಮಾತ್ರ ಸಂಸ್ಕೃತಿಯ ಅವಿಭಾಜ್ಯ ಮಿಡಿತಗಳಾಗಿ ಹೊರಹೊಮ್ಮಿದೆ, ಮಧ್ಯಯುಗದ ಶರಣರ ಸ್ತ್ರೀಪರ ಆಶಯಗಳು ಸ್ತ್ರೀ ಸಮಾಜದಲ್ಲಿ ಮೂಡಿಸಿದ

ಸಂಚಲನವ ಫಲವಾಗಿ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಚರಿತ್ರೆಯಲ್ಲಿ ಹೆಣ್ಣಿನ ಧ್ವನಿ ದಾಖಲಾಯಿತು. ಲಿಂಗ ತಾರತಮ್ಯ ಪುರುಷ / ಪರ ಸ್ತ್ರೀ ವಿರೋಧಿ ರಚನೆಗಳ ಅಮಾನೀಯತೆಯನ್ನು ಪರಿಶೀಲಿಸುವ ಸ್ತ್ರೀ ವಿಶಿಷ್ಟ ಸಂವೇದನೆಗಳ ವಚನಗಳ ರೂಪದಲ್ಲಿ ಅಭಿವ್ಯಕ್ತಿಗೊಂಡವು.

ಮಧ್ಯಯುಗದ ಸ್ತ್ರೀ ವಿರೋಧಿ ರಚನೆಗಳ ಅಮಾನವಿಯತೆಯನ್ನು, ಮಧ್ಯಯುಗದ ತರುವಾಯ ಕನ್ನಡ ಮಹಿಳಾ ಸ್ತ್ರೀಯಾತ್ಮಕ ಪ್ರಜ್ಞೆಯೊಂದಿಗೆ ಬದುಕಿಗೆ ಪ್ರತಿಕ್ರಿಯಿಸಿದರು. 20ನೆಯ ಶತಮಾನದಲ್ಲಿ ಆಧುನಿಕ ಕನ್ನಡ ಮಹಿಳಾ ಸಾಹಿತ್ಯಕ್ಕೆ ಮೊದಲ ಪುಟಗಳನ್ನು ಬರೆದ ಲೇಖಕಿಯರ ಕೇಂದ್ರ ಸಂವೇದನೆ ಸ್ತ್ರೀಪರ ಧ್ವನಿಸುವ ಸ್ತ್ರೀಪರ ಸಾಹಿತ್ಯ ರಚಿಸಿ ಲಿಂಗ ಪೂರ್ವಗ್ರಹಗಳ ಅಮಾನವೀಯತೆಯೆಡೆಗೆ ಮೊದಲ ಗಮನಸೆಳೆದರೆನ್ನುವುದಕ್ಕೆ ಚಾರಿತ್ರಿಕ ಮಹತ್ವವಿದೆ.

ಹೀಗೆ ಸ್ತ್ರೀ ಸಮಾಜ ಸುಧಾರಣೆಯ ಕಾಳಜಿಯೊಂದಿಗೆ ಸಮಾಜಮುಖಿಯಾಗಿ ರೂಪಗೊಂಡ ಕನ್ನಡ ಲೇಖಕಿಯರ ಸಾಹಿತ್ಯ ಸಂವೇದನೆಯ ಸ್ವಾತಂತ್ರ್ಯೋತ್ತರ ಸಂದರ್ಭದ ಜನಪರ ಚಳುವಳಿಗಳಿಂದ ಮತ್ತು ಮಹಿಳಾವಾದಿ ಚಿಂತನೆಗಳ ಪ್ರಭಾವದಿಂದ ಸ್ತ್ರೀ ವಿಶಿಷ್ಟ ಪ್ರಜ್ಞೆಯ ಅನುಸಂಧಾನವಾಗಿ ವಿಕಾಸಗೊಂಡಿದೆ, ಸ್ತ್ರೀವಾದಿ ತಾತ್ವಿಕತೆಯ ಲಿಂಗನ್ಯಾಯದ ವೈಜ್ಞಾನಿಕ ಒಳನೋಟಗಳಿಂದ ಮಹಿಳಾ ಅಸ್ಥಿತ್ವ ಮತ್ತು ಅನನ್ಯತೆಯ ಶೋಧವಾಗುತ್ತಿರುವುದು ಮಹಿಳಾ ಪ್ರಜ್ಞೆಯ ವಿಕಾಸದ ಲಕ್ಷಣವು ಹೌದು; ಒಟ್ಟಾರೆ ಇದು ಮಹಿಳೆಯ ಸ್ವಾನುಭವ ಮತ್ತು ಸ್ವಾಭಿವ್ಯಕ್ತಿಯ ಪರಂಪರೆಯನ್ನು ಸ್ತ್ರೀವಾದಿ ಎಚ್ಚರದೊಂದಿಗೆ ಮರುಪರಿಶೀಲಿಸುತ್ತ ಕಥನವಾಗಿಸುವ ಮೂಲಕ ಮಹಿಳಾ ಅಭಿವ್ಯಕ್ತಿ ಸಾಕ್ಷಾರಗೊಳ್ಳುತ್ತದೆ. ಶತಮಾನಗಳುದ್ದಕ್ಕೂ ಸ್ತ್ರೀ ಸಮಾಜ ಅನುಭವಿಸಿದ ಅವಮಾನ ಕಳೆದುಕೊಂಡ ಅವಕಾಶ ಅನುಸಂಧಾನದ ಅಸ್ತಿತ್ವ ಮತ್ತು ಆತ್ಮ ಸಮರ್ಥನೆಯ ತುಡಿತವಾಗಿ ಹರಳುಗಟ್ಟುತ್ತಿರುವುದು ಕನ್ನಡ ಮಹಿಳಾ ಕಥಾಸಾಹಿತ್ಯ ಇತ್ಯಾತ್ಮಕ ಬೆಳವಣಿಗೆಯಾಗಿದೆ.

ಮಹಿಳಾ ಸಬಲೀಕರಣ ರಾಷ್ಟ್ರೀಯ ಅಜೆಂಡಾ ಆಗಿರುವ ಕಾರಣ ಪಡೆದಿದೆ ಮಹಿಳಾ ಸಮಾಜದ ಮುನ್ನಡೆಯಲ್ಲಿ ದೇಶದ ರಾಜಕೀಯ ಮಹತ್ವ ಪಡೆದಿವೆ. ಮಹಿಳಾ ಸಮಾಜದ ಇಂದು ನಿಚ್ಚಳವಾಗಿದೆ. ವೈಚಾರಿಕ ಜಾಗೃತಿಗೆ ದನಿ ಎತ್ತುತ್ತಲೇ ಬಂದಿರುವುದಕ್ಕೆ ಚಾರಿತ್ರಿಕ ಮಹತ್ವವಿದೆ. ಕಳೆದ ಶತಮಾನದ ಮೊದಲ ದಶಕದಲ್ಲಿ ಮಹಿಳಾ ಪ್ರಗತಿಗಾಗಿ ಶಿಕ್ಷಣವನ್ನು ಬೆಂಬಲಿಸಿ ಸ್ತ್ರೀ ವಿರೋಧಿ ಕಂದಾಚಾರಗಳನ್ನು ಖಂಡಿಸಿ ಸ್ತ್ರೀ ಸಮಾಜದ ಮುನ್ನಡೆಯ ಕನಸು ಕಂಡ ನವೋದರ ಲೇಖಕಿಯರ ಹಂಬಲ ಶತಮಾನದ ನಂತರವೂ ಪೂರ್ಣವಾಗಿ ಸಾಕಾರಗೊಳ್ಳದಿರುವುದು ಸ್ತ್ರೀ ವಿರೋಧಿ

ಸಾಮಾಜಿಕ ವಾಸ್ತವತೆಯತ್ತ ಬೆರಳು ಮಾಡುತ್ತದೆ. "ಮಹಿಳಾ ಸಾಕ್ಷರತೆ, ವರದಕ್ಷಿಣೆ, ಕೌಟುಂಬಿಕ ದೌರ್ಜನ್ಯ, ಲಿಂಗಪೂರ್ವಗ್ರಹಗಳು, ಲಿಂಗತ್ವ ಸಮಸ್ಯೆಯನ್ನು ಮರೀಚಿಕೆಯಾಗಿಸಿವೆ."[೩೪]

ಶತಮಾನದ ಹಿಂದೆ ವಿಧವಾ ಮರುವಿವಾಹ, ಬಾಲವಿವಾಹ ನಿಷೇಧ, ವರದಕ್ಷಿಣೆ ಪದ್ಧತಿಯ ನಿವಾರಣೆ, ಪ್ರೇಮವಿವಾಹ, ಲಿಂಗ ಸಮಾನತೆಯ ಪ್ರತಿಪಾದನೆಗಾಗಿ ತಮ್ಮ ಲೆಕ್ಕಣಿಕೆ ಮೀಸಲಾಗಿರಿಸಿದ ಅವರ ಈ ಎಲ್ಲಾ ಅಂಶಗಳನ್ನು ಗಮನಿಸಿಕೊಂಡು ಪರಂಪರೆ ಮತ್ತು ಆಧುನಿಕ ಮುಖಾಮುಖಿ ಮಾಡುವ ಪ್ರಯತ್ನವಾಗಿದೆ.

ಹೀಗೆ ಪರಂಪರೆ ಆಧುನಿಕತೆಯನ್ನು ಮುಖಾಮುಖಿಯಾಗಿಸುವ "ಪುನರ್ ವಿವಾಹ" ಕತೆಯನ್ನು ನೋಡುವುದಾದರೆ ಇಲ್ಲಿ ಆಧುನಿಕತೆಯ ಮತ್ತು ಪರಂಪರೆಯ ಸಮಸ್ಯೆಗಳನ್ನು ಈ ಕತೆಯ ಪ್ರಶ್ನಿಸುವ ಅಂತಕ್ಕೆ ಬರುತ್ತದೆ. ಸಂಪ್ರದಾಯ ಮತ್ತು ಆಧುನಿಕತೆಯ ಸಂಘರ್ಷದಲ್ಲಿದ್ದ ಸಮಕಾಲೀನ ಕನ್ನಡ ಸಾಹಿತ್ಯದ ದ್ವಂದ್ವಗಳನ್ನು ಸರಿಯಾಗಿ ಗ್ರಹಿಸಿದ ಅವರು ವರದಕ್ಷಿಣೆ–ವೈವಿಧ್ಯ, ಬಾಲವಿವಾಹ, ವಿಧವಾವಿವಾಹ ಇತ್ಯಾದಿ ಸಂಗತಿಗಳನ್ನು ಸ್ತ್ರೀಪರವಾಗಿ ವ್ಯಾಖ್ಯಾನಿಸಿ ಸ್ತ್ರೀ ವಿರೋಧಿ ಕಂದಾಚಾರಗಳನ್ನು ವಿರೋಧಿಸಿದರು. ಸ್ತ್ರೀ–ಪುರುಷರನ್ನು ಅಸಮಾನವಾಗಿಸಿದ ಪಕ್ಷಪಾತ ನೀತಿಗಳನ್ನು "ಪುನರ್ವಿವಾಹ"ದ ನಾಯಕಿ 'ರಾಜ'ಯ ಮೂಲಕ ಬರಹೆ ಹೆಚ್ಚುತ್ತಾರೆ. ಹೀಗೆ ಲಿಂಗ ತಾರತಮ್ಯ ಮತ್ತು ವರ್ಗ ಪ್ರತಿಷ್ಠೆಗಳ ಕುರುಡುತನದಲ್ಲಿ ಹುಟ್ಟಿಕೊಳ್ಳುವ ಮಹಿಳೆ ಸಾರ್ವಜನಿಕ ಅನ್ಯಾಯದ ಪ್ರಶ್ನೆಗಳನ್ನೆತ್ತುವ ಆಧುನಿಕ ವೈಚಾರಿಕೆಯಿಂದ ಕೊಡಗಿನ ಗೌರಮ್ಮ ವಿಶಿಷ್ಠರಾಗುತ್ತಾರೆ. ಹೀಗೆ ಆಧುನಿಕ ಮತ್ತು ಪರಂಪರೆಯನ್ನು ಅಭಿವ್ಯಕ್ತಿಗೆ ಸಣ್ಣಕತೆಯನ್ನು ಹದಗೊಳಿಸಿದವರು ಗೌರಮ್ಮ. ಈ ಒಂದು ಕತೆಯ ಸಂಪೂರ್ಣವಾದ ಆಧುನಿಕ ವ್ಯವಸ್ಥೆಯನ್ನು ತೋರಿಸುವ ಪ್ರಯತ್ನವಾಗಿದೆ. "ಅಂದರೆ ಮನುಷ್ಯ ಸಂಬಂಧಗಳು ಯಾವ ಕಾಲದ್ದಾದರೂ ಅವು ಒಂದೇ ರೀತಿಯಲ್ಲಿ ಮುನ್ನಡೆಯುತ್ತದೆ"[೩೬] ಇದೇ ಸಾಕ್ಷಿಯಾಗಿದೆ. ಸಮಾಜದಲ್ಲಿ ಬಾವನೆಗಳು ಬದಲಾವಣೆಯಾದರೂ ಅವರಲ್ಲಿ ಅಡಗಿರುವ ಕೆಟ್ಟಭಾವನೆಗಳು ಯಾವ ಯಾವ ಕಾಲದಲ್ಲಿಯಾದರೂ ಒಂದೇ ವಸ್ತು ರೀತಿಯಲ್ಲಿ ಮುಂದುವರಿಯುತ್ತವೆ.

ಗೌರಮ್ಮನ ಪ್ರಾರಂಭದ ಕತೆ "ಪುನರ್ವಿವಾಹ" ತಾಯಿಯ ಪುರುಸೊತ್ತಿಲ್ಲದೆ ಮಗಳು ಕೆಡುವುದಿಲ್ಲ, ಸೂಕ್ಷ್ಮ ಸಂವೇದನೆ ಅನ್ನುವುದೇ ಮನೋವೈಚಾರಿಕ ದೃಷ್ಠಿ. ಅಂದ ಮೇಲೆ ಮನಃಶಾಸ್ತ್ರದಿಂದ ಸಾಹಿತ್ಯ ದೂರವಿರಲಾರದು. ಇಂಥ ಸಾವಿನ್ಯತೆಯ ವೈಶಿಷ್ಠ ಗೌರಮ್ಮನ ಕತೆಗಳಲ್ಲಿ

ಸಂವೇದನಾಶೀಲತೆನ್ನು ಕಾಣಬಹುದು. ಇಲ್ಲಿ ಬರುವ ಸಂಗತಿಗಳು ಮೇಲುನೋಟಕ್ಕೆ ಸಾಮಾನ್ಯವೆನಿಸಬಹುದು, ಆದರೆ ಅಸಮಾನ್ಯತೆಯನ್ನು ತುಂಬಿಸುವ ಕಥಾ ಸ್ವರೂಪ ಗೌರಮ್ಮನದ್ದಾಗಿದೆ. ಆಶಯ ಉದ್ದೇಶ, ಸ್ವರೂಪ, ಸಮಸ್ಯೆ ಎಲ್ಲವೂ ತುಂಬಿಕೊಂಡೇ ಕಥೆ ಹುಟ್ಟಿಕೊಳ್ಳುತ್ತದೆ. ಇದು ಕಲಾತ್ಮಕತೆಗಳ ಸಾಕ್ಷಿಯೇ ಆಗಿದೆ.

ಈ ಸ್ತ್ರೀ ಪುರುಷ ಸಂಬಂಧ ವಿಚಿತ್ರವಾದದ್ದು, ಪರಂಪರೆಯಲ್ಲಿ ಸ್ತ್ರೀಯರಿಗೆ ಗೌರವವನ್ನು ಕೊಡುತ್ತಿದ್ದರು. ಆಗ ಆಧುನಿಕ ಪ್ರಪಂಚದಲ್ಲಿ ಸಂಸಾರದಲ್ಲಿಯ ಹಿಂಸೆ ಕೂಡ ಅವರಿಬ್ಬರ ಅನ್ಯೋನ್ಯತೆಗೆ ಕಾರಣವಾಗುತ್ತದೆ. ಗಂಡನಾದವನು ಹೆಂಡತಿಗೆ ಕೊಡುವ ಹಿಂಸೆ ಒಂದು ರೀತಿಯ ಪ್ರೇಮದ ಭಾಗವೇ ಆಗಿದೆ. ಅಷ್ಟೇ ಅಲ್ಲ ಹೆಂಡತಿ ಗಂಡನಿಂದ ಅನುಭವಿಸುವ ಹಿಂಸೆ ಹೆಂಡತಿಯ ಸಮಾಧಾನದ ಕಾಮ-ಪ್ರೇಮಕ್ಕೆ ಉತ್ತೇಜನ ನೀಡುತ್ತದೆ. ಇಲ್ಲಿ ಇಬ್ಬರ ಮನಸ್ಸು ಮಾತ್ರ ನಿರ್ಮಲವಾಗಿರಬೇಕು. ಇಂಥ ಜಗಳಗಳು ಪಾಶ್ಚಾತ್ಯ ದೇಶಗಳಲ್ಲಿ ನಡೆದರೆ ವಿವಾಹ ವಿಚ್ಛೇಧನಕ್ಕೆ ಕಾರಣವಾಗುತ್ತದೆ. ಇಂಥ ರೋಗ ಈಗ ರಾಜಧಾನಿಗಳಿಂದ ಬೃಹತ್ ನಾಗರೀಕ ಸುಶಿಕ್ಷಿತರಲ್ಲಿಯೇ ಚಲಾವಣೆಗೊಳ್ಳುತ್ತಿದೆ. ಭಾವನಾತ್ಮಕ ಬದುಕಿನಿಂದ ದೂರ ಸರಿಯದ ಪ್ರವೃತ್ತಿ ಹೆಚ್ಚಾಗಿದೆ. ಹಿಂದೆ ಸಾಹಿತ್ಯದಲ್ಲಿ ರಾಹುಲ್ ಸಾಕೃತ್ಯಾಯ ಬಹುದೊಡ್ಡ ಹೆಸರು. ಅವರ ಬರಹಗಳಲ್ಲಿ ಆಶಯಗಳನ್ನು ತುರುಕಿದಂತಾಗುತ್ತದೆ. ಹಾಗೆಯೇ ಗೌರಮ್ಮನ ಕಥಾಲೋಚನೆಯ ಮುಂದಾವಲೋಕನವು ಆಶಯ ಉದ್ದೇಶಗಳನ್ನು ಹೊತ್ತು ತರುವುದಾಗಿದೆ. ಗೌರಮ್ಮನ ಕತೆಗಳಲ್ಲಿ ಪರಿಣಾಮ ಎದ್ದು ಕಾಣಿಸುತ್ತದೆ. ಆದ್ರೆ ಸಾಂಕೃತ್ಯಯಯನದ ಕತೆಗಳಲ್ಲಿ ಉದ್ದೇಶ ಎದ್ದು ಕಾಣಿಸುತ್ತದೆ.

"ಅವಳ ಭಾಗ್ಯ" ಕತೆಯಲ್ಲಿ ಜಮೀನ್ದಾರರ ಮಗಳು ಮುಖದಲ್ಲಿ ಅಸಹ್ಯವಾಗಿರುವುದರಿಂದ ಕುರೂಪಳಾಗಿ ಕಾಣುತ್ತಾಳೆ. ಆದರೆ ಅವಳು ಪ್ರತಿಭಾವಂತಳು ಅಷ್ಟೇ ಅಲ್ಲ, ಹೃದಯವಂತಳೂ, ಅಂಥವಳನ್ನು ಮದುವೆಯಾದ ಡಾಕ್ಟರ್ ಕಿಚ್ಚಣ್ಣ ಕ್ಷಯರೋಗಿ ಆದರೂ, ಗಂಡ ಸಿಕ್ಕ ವೃತ್ತಿ ರೂಪ ರೋಗ ಇವು ಸುಖರೂಪಕ್ಕೆ ಬಂಧೆ ತರಲಾರವು ಎಂದೂ ನಾವು ಪ್ರಕೃತಿದತ್ತವೇ ಆಗಿವೆ. ಇಂಥದೊಂದು ವಿಶಿಷ್ಠ ತಾತ್ಪರ್ಯವನ್ನು ನಾವು ಈ ಕತೆಯಲ್ಲಿ ಕಂಡುಕೊಳ್ಳಬಹುದು. ಬೇರೆ ಬೇರೆ ವ್ಯಕ್ತಿತ್ವ ಹಾಗೂ ಮನಸ್ಸುಗಳ ಗಂಡು ಹೆಣ್ಣು ಒಟ್ಟಿಗೆ ಜೊತೆಗಿರುವುದು ಪ್ರಕೃತಿ ಒಂದು ಅವಶ್ಯಕತೆ ಮಾಡಿಟ್ಟಿದೆ. ಕುಟುಂಬ ಸಮಾಜದ ಒಂದು ಚಿಕ್ಕ ಘಟಕ, ಈ ಘಟಕದ ಮುಖ್ಯ ಪಾತ್ರಗಳೇ ಗಂಡು-ಹೆಣ್ಣು, ಈ ಘಟಕ ಚೆನ್ನಾಗಿದ್ದರೆ ಮಾತ್ರ ಸ್ವಸ್ಥ ಸಮಾಜ ನಿರ್ಮಾಣವಾಗಲು ಸಾಧ್ಯ.

ಇದು ಹಿಂದಿನವರ ಆದರ್ಶ. ಈ ಆದರ್ಶದೊಂದಿಗೆ ಕುಟುಂಬ ಪದ್ಧತಿಯಲ್ಲಿ ಅಸಂಖ್ಯ ರೀತಿಯ ನೋವು, ಹಿಂಸೆ, ಘರ್ಷಣೆ ಜೊತೆಯಾಗಿಯೇ ನಡೆದುಬರುತ್ತದೆ. ಕುಟುಂಬ ವ್ಯವಸ್ಥೆಯ ಮೇಲೆ ಪುರುಷನ ದಬ್ಬಾಳಿಕೆ ಪರಂಪರೆಯಿಂದ ಆಧುನಿಕ ಸಮಯದಲ್ಲಿ ಮುಂದುವರಿಯುತ್ತಿದ್ದಂತೆ ತನ್ನ ಮಾತೇ ಅಂತಿಮ ಎಂಬ ಘರ್ಷಣೆ, ಪ್ರಭುತ್ವ ನಡೆದುಬಂದಿದೆ. ಆಗಿನಿಂದ ಈಗಿನವರೆಗೂ ಇಂತಹ ಮನೆಯೊಳಗಿನ ಹಿಂಸೆಯನ್ನು ಸದಾ ಸಹಿಸುತ್ತಲೇ ಬಂದ ಹೆಣ್ಣು, ತನ್ನ ದೌರ್ಭಾಗ್ಯಕ್ಕಾಗಿ ಕಣ್ಣೀರಿಡುತ್ತಲೇ ಬಂದಿದ್ದಾಳೆ. ಇದು ಕೂಡ ಗೌರಮ್ಮನ ಪ್ರಾರಂಭದ ಕತೆಯೇ ಆಗಿದೆ. ಈ ಕತೆ ಭಾಷೆಯ ತುಂಬ ಸರಳ ಶೈಲಿಯಲ್ಲಿ ರೂಪಿತಗೊಂಡಿದೆ. ಕಮ್ಯುನಿಷ್ಟ್ ದೃಷ್ಠಿ ಈ ಕತೆಯಲ್ಲಿದೆ. ರಷ್ಯನ್ ಸಾಹಿತ್ಯ ಓದಿನ ಪ್ರಭಾವ ಈ ಕತೆಯಲ್ಲಿದೆ. ಇವರ ಒಟ್ಟು ಕತೆಗಳ ಕಲಾತ್ಮಕತೆಯ ಅನುಭೂತಿ ಮಾತ್ರ ಮೆಚ್ಚುವಂಥದು ಎಲ್ಲಾ ಕತೆಗಳ ಸಿದ್ಧಾಂತಬದ್ಧವಾಗಿದೆ. ಆದರೂ ಎಲ್ಲ ಕತೆಗಳಲ್ಲಿಯೂ ಓದಿಸಿಕೊಂಡ ಹೋಗುವ ಅಮೂಲ್ಯ ಗುಣಗಳಿವೆ.

ಯಾವುದೇ ಸಾಹಿತ್ಯ ಓದಿ ಎಂದು ಹೇಳಿದರೆ ಓದಲಾಗದು, ಅದು ಆಯಾ ಸಾಹಿತ್ಯದ ಗುಣಧರ್ಮ, ಸಾಹಿತ್ಯ ನಾವು ಓದುವುದು ಎನ್ನುವುದಕ್ಕಿಂತಲೂ ಓದಿಸಿಕೊಂಡು ಹೋಗುವುದೇ ಸಾಹಿತ್ಯ ಗುಣ. ಅದು ಲೇಖನವನ್ನು ಗಮನಿಸುವುದಿಲ್ಲ. ಸಾಹಿತ್ಯವನ್ನು ಗಮನಿಸುವುದು ಒಳ್ಳೆಯ ಸಾಹಿತ್ಯಕ್ಕೆ ಲೇಖಕ ಮುಖ್ಯವಾಗುವುದಿಲ್ಲ.

'ಆಹುತಿ' ಕತೆಯ ಬರವಣಿಗೆಯ ಅಚ್ಚುಕಟ್ಟುತನ ಮೆಚ್ಚುವಂಥದು. ಈ ಒಂದು ಕತೆಯಲ್ಲಿ ಪರಂಪರೆಯಿಂದ ಆಧುನಿಕತೆಗೆ ಹರಿದು ಬಂದಿರುವ ಒಂದು ದೊಡ್ಡ ಪಿಡುಗು ವರದಕ್ಷಿಣೆ, ಆಹುತಿಯಲ್ಲಿ ಗೌರಮ್ಮ ತುಂಬಾ ಅಚ್ಚುಕಟ್ಟಾಗಿ ಕಟ್ಟಿಕೊಂಡಿದ್ದರೆ ಕತೆಗಾರ್ತಿ ಪುರುಷನಾಗಿ ಕತೆ ಹೇಳುತ್ತಾಳೆ. ಎಂ.ಎ., ಓದಿದ ಹುಡುಗನಿಗೆ ವಿದೇಶದಲ್ಲಿ 'ಲಾ' ಕಲಿಯುವಾಸೆ, 'ಲಾ' ಕಲಿಯುವ ಆರ್ಥಿಕ ಶಕ್ತಿ ತನಗಿಲ್ಲದಿರುವಾಗ ಹೆಣ್ಣು ಕೊಡುವ ಅವಲಂಬಿಸುವ ದುರಾಸೆ, ಆಧುನಿಕ ಪ್ರಪಂಚದಲ್ಲಿ ಇವೆಲ್ಲ ನಡೆಯುತ್ತದೆ. ಹೀಗಾಗಿ ತಂದೆ ಗೊತ್ತುಪಡಿಸಿದ ಬಡ ಹುಡುಗಿಯೊಂದಿಗೆ ಮದುವೆಯಾಗಲು ಒಪ್ಪದೆ ಮನೆಬಿಟ್ಟು ಮದ್ರಾಸಿಗೆ ಹೋಗುತ್ತಾನೆ. ಟ್ರೇನ್‌ನಲ್ಲಿ ಪರಿಚಯವಾದ ಹಿರಿಯ ಪ್ರಯಾಣಿಕನೊಬ್ಬನ ಆಶ್ರಯ ಪಡೆದುಕೊಂಡ ಇಬ್ಬರು ಹೆಣ್ಣು ಹುಡುಗಿಯರಿಗೆ ಪಾಠ ಹೇಳತೊಡಗುತ್ತಾನೆ. ಒಬ್ಬಳ ಹೆಸರು "ಸೀತೆ" ಇನ್ನೊಬ್ಬಳ ಹೆಸರು "ಶಾಂತಿ" ಇದ್ದಕ್ಕಿದ್ದಂತೆ ಶಾಂತಿ ತಮ್ಮೂರಿಗೆ ಹೋಗುತ್ತಾಳೆ. ಅವಳ ರೂಪ, ನಡವಳಿಕೆ ಈತನಿಗೆ ಅಪ್ಯಾಯವೆನಿಸುತ್ತದೆ. ಅವಳನ್ನು ತನ್ನ ಮನಸ್ಸಿನಲ್ಲಿಟ್ಟುಕೊಂಡು ಕೊರಗುತ್ತಾಳೆ. ಅವಳು ಹೋಗಿ ಬಂಧುಮಿತ್ರಳಾಗಿ ಸೀತೆಗೊಂದು ಪತ್ರ

ಬರೆದು ತನ್ನನ್ನು ಮುದುಕನೋರ್ವನಿಗೆ ಕೊಟ್ಟು ಮದುವೆ ಮಾಡಲು ಮನೆಯಲ್ಲಿ ಸಿದ್ಧರಾಗಿರುತ್ತಾರೆ. ಆಗ ತಾನು ಆತ್ಮಹತ್ಯೆಗೆ ತೊಡಗಿದೆ ಎನ್ನುವುದನ್ನು ತಿಳಿಸಿರುತ್ತಾಳೆ. ಇದು ಈ ವಿದ್ಯಾವಂತನಿಗೆ ತಿಳಿಯುತ್ತದೆ. ಹೆಣ್ಣಿನ ಸ್ಥಿತಿ ಬಗ್ಗೆ ಮರುಕ ವ್ಯಕ್ತಪಡಿಸುತ್ತಾನೆ. ಈ ಒಂದು ಸ್ಥಿತಿ ಪರಂಪರೆಯಿಂದ ಈಗಿನ ಆಧುನಿಕ ಹೆಣ್ಣು ಮಕ್ಕಳ ಜೀವನ ಪರಿಸ್ಥಿತಿಯಲ್ಲಿ ಬದಲಾವಣೆಯಾಗಿಲ್ಲ. ಕಾರಣ ವರದಕ್ಷಿಣೆ ಒಂದೇ ಕಾರಣದಲ್ಲಿ ಕುಟುಂಬದಲ್ಲಿ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಯರಿಗೆ ಕೊಟ್ಟಿರುವ ಒಂದು ಸ್ಥಾನವೆಂದು ಆಧುನಿಕ ಪ್ರಪಂಚದಲ್ಲಿ ತಿಳಿಯಬುದು. ತನ್ನ ಮನಸ್ಸಿನ ಮೇಲೆ ಪರಿಣಾಮ ಮಾಡಿಕೊಂಡು ವರದಕ್ಷಿಣೆ ಬಲಿಯಾದ ಶಾಂತಿಯಂಥ ಹುಡುಗಿಯರೆಷ್ಟು ನಮ್ಮ ನಡುವೆ ಇದ್ದು ಪರಿತಪಿಸುತ್ತಾರೆ. ಪ್ರಾಣ ಕಳೆದುಕೊಳ್ಳುತ್ತಾರೆಂದು ಪರಿತಪಿಸಿ ಈ ವರದಕ್ಷಿಣೆ ಆಸೆಯ ವಿದ್ಯಾವಂತ ತಿರುಗಿ ಮನೆಗೆ ಬರುತ್ತಾನೆ. ಮನೆಯವರೆಲ್ಲರೂ ಖುಷಿಯಾಗುತ್ತಾರೆ. "ನಿನ್ನಂಥ ವಿದ್ಯಾವಂತರನ್ನು ಅಪೇಕ್ಷೆಗೆ ಬಲಿಯಾದ ಶಾಂತಿಯ ಭಾವಚಿತ್ರ ಮತ್ತು ಆತ್ಯಹತ್ಯೆಯ ಪತ್ರಿಕಾ ವರದಿಯನ್ನು ಅಣ್ಣನಿಗೆ ತೋರಿಸಿ"[೩೭] ನೀನು ನೋಡುತ್ತಿದ್ದರು ನೀನು ಕೊಂದ ಹುಡುಗಿಯನ್ನು ಎಂದಳು, ಆತುರದಿಂದ ನೋಡಿದ ವಿದ್ಯಾವಂತ ಗಾಬರಿಗೊಳ್ಳುತ್ತಾನೆ. ಶಾಂತಿರಿಸು ಚಿತ್ರ ವರದಕ್ಷಿಣೆಗೆ ಆಹುತಿ ಶಾಂತಿಯೇ ನಾವು ಮೊದಲು ಕೈಬಿಟ್ಟು ಪಶ್ಚಾತ್ತಾಪಪಡುತ್ತಾನೆ.

ಒಬ್ಬ ಹೆಣ್ಣು ಮಗಳು ತಾನು ಕತೆಗಾರನಾಗಿ ಬರೆಯುವಾಗ ನೈತಿಕತೆ ಬಹುತೇಕ ಕಾಡುತ್ತದೆ. ಒಬ್ಬ ಹೆಣ್ಣಾಗಿಯೋ ಗಂಡಸಿನ ಕುರಿತು ನಿರ್ದಾಕ್ಷಿಣ್ಯವಾಗಿ ಬರೆಯಲು ಹಿಂಜರಿಯುತ್ತಾಳೆ. "ಈ ಭಯ ಕಾಡುತ್ತಿರುವುದು ಕತೆಗಾರ್ತಿಗೆ ಅಂತೆಯೋ ತಾನು ಎಂದು ಸಂಭೋದಿಸಬೇಕಾಗಿಲ್ಲ."[೩೮] ಪುರುಷನಾಗಿಯೋ ಪಾತ್ರ ಸೃಷ್ಠಿಗೆ ತೊಡಗುತ್ತಾಳೆ, ಹೆಣ್ಣಿನ ಎನ್ನುವುದನ್ನು ಕಾಯ್ದುಕೊಳ್ಳುವಲ್ಲಿ ಶೀಲ, ಚಾರಿತ್ರ್ಯ ಕೊಂಡ ಹೆಣ್ಣಿನ ಜಾಗೃತಗೊಳಿಸುತ್ತದೆ. ಗಂಡಸನಾಗಿರುವ ಕತೆಗಾರನಿಗೆ ಈ ಕೊರಗು ಕಾಡುವುದಿಲ್ಲ?

ಗೌರಮ್ಮನವರ ಆಹುತಿ ವರದಕ್ಷಿಣೆ ಸಮಸ್ಯೆ ಕುರಿತಂತೆ ಕನ್ನಡದಲ್ಲಿ ಬಂದ ಆರಂಭದ ಕತೆಗಳಲ್ಲಿ ಬಂದ ಅಥವಾ ಅದೇ ಮೊಟ್ಟಮೊದಲ ಕತೆ ಆಗಿದ್ದರೂ ಆಗಿದ್ದಿರಬಹುದು, ಮೇಲ್ನೋಟಕ್ಕೆ ಅದೊಂದು ಸರಳ ಕತೆ.

ಲಂಡನ್ಗೆ ಹೋಗಿ ಓದಬೇಕೆಂಬ ಆಸೆಯಿಂದ ಪದವೀಧರನೊಬ್ಬ ತನ್ನ ತಂದೆ ನೋಡಿದ ಬಡ ಹುಡುಗಿಯನ್ನು ತಿರಸ್ಕರಿಸುತ್ತಾನೆ. ಆದರೆ ಕಾರಣಾಂತರದಿಂದ ಅದೇ ಹುಡುಗಿಯಲ್ಲಿ

ಅನುರಕ್ತಳಾದ ಆತ್ಮ ನಿಜಸಂಗತಿ ತಿಳಿಯುವ ವೇಳೆಗೆ ಆ ಹುಡುಗಿ ತನ್ನ ತಂದೆ ಆರಿಸಿದ ಮುದುಕನನ್ನು ಮದುವೆಯಾಗಲು ನಿರಾಕರಿಸಿ ಈ ಜಗತ್ತನ್ನೇ ತ್ಯಜಿಸುತ್ತಾಳೆ.

ಮೆಲೋಡ್ರಾ ಮಿಂಟಿಕ್ ಅಂಶ ಇದ್ದರೂ ಇದೊಂದು ಒಳ್ಳೆಯ ಕತೆ. ವರದಕ್ಷಿಣೆ ಪ್ರತ್ಯೇಕ ಸಮಸ್ಯೆ ಅಲ್ಲ. "ಅದು ಇತರ ಸಾಮಾಜಿಕ ಸಮಸ್ಯೆಗಳ ಜೊತೆ ಹೊಂದಿಕೊಂಡಿದೆ ಎಂದು ತೋರಿಸುವ ಕತೆಯ ಪಾತಳಿಯಲ್ಲಿ ಸಂಕೀರ್ಣತೆ ಇದೆ"[೩೯].

ಗೌರಮ್ಮ ಬರವಣಿಗೆಗೆ ತೊಡಗಿದ ಸಮಯದಲ್ಲಿ ವರದಕ್ಷಿಣೆ ಸಮಸ್ಯೆ ಮಾತ್ರ ಇತ್ತು. ಅವರು ಕೇಳಿದಷ್ಟು ವರದಕ್ಷಿಣೆ ತರದೇ ಹೋದ ಕಾರಣ ಹೆಣ್ಣು ಮಕ್ಕಳನ್ನು ಸುಡುವ ಭೀಕರ ಮತ್ತು ಅಮಾನುಷ ಪರಿಸ್ಥಿತಿ ಆಗಿನ್ನೂ ಕಾಣಿಸಿಕೊಂಡಿರಲಿಲ್ಲ. ಆದರೆ ಅದರ ಬೀಜರೂಪವನ್ನೂ ಆಹುತಿಯಲ್ಲಿ  ಕಾಣಬಹುದು. ವರದಕ್ಷಿಣೆ ತರದ ಕಾರಣ ಸೀಮೆಎಣ್ಣೆ ಹಾಕಿ ಬೆಂಕಿಯಿಂದ ಸುಟ್ಟುಹಾಕುವುದು ಮತ್ತು ಬಡತನದಲ್ಲಿ ಬಂದ ಹುಡುಗ ವರದಕ್ಷಿಣೆ ಶಾಪ ತಾಳಲಾರದೆ ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೂ ಅಂತರ ಹೆಚ್ಚೇನಿಲ್ಲ.

ಸಾಮಾಜಿಕ ಪರಿಸ್ಥಿತಿ ಗೌರಮ್ಮನವರ ಕಾಲಕ್ಕೂ ಇಂದಿಗಿಂತ ಕೆಲವೊಂದು ವಿಚಾರದಲ್ಲಿ ಹದಗೆಟ್ಟು ಬದಲಾಗಿರುವುದು ನಿಜ. ಆದರೆ ಕೆಲವೊಂದು ವಿಚಾರದಲ್ಲಿ ಹದಗೆಟ್ಟು ಹಿಂದಕ್ಕೆ ಹೋಗುತ್ತಿರುವುದು ಅಷ್ಟೇ ವಾಸ್ತವ. ಮರೆತುಹೋಗಿದ್ದ ಸತಿ ಪದ್ಧತಿಯ ವೈಭವೀಕೃತ ಮರುಕಳಿಕೆ ಉತ್ತಮ ನಿದರ್ಶನ, ಸತಿಪದ್ಧತಿ ಮತ್ತು ವರದಕ್ಷಿಣೆ ಸಾವಿನ ನಡುವೆಯೂ ಅಂತರ ಕೇವಲ ತಾತ್ವಿಕವಾದುದು. ಒಂದು ಗಂಡ ಸತ್ತನಂತರ ಮತ್ತೊಂದು ಗಂಡ ಇದ್ದಾಗಲೇ ಹೋಗುವುದು.

"ಒಬ್ಬ ಹೆಣ್ಣು ಮಗಳು ತನ್ನ ಅನಿಸಿಕೆಗಳನ್ನು ಸ್ವಾತಂತ್ರ್ಯವಾಗಿ ಹೇಳಿಕೊಳ್ಳಲಾಗದ ಸಂದರ್ಭದಲ್ಲಿ ಮತ್ತು ಮನೆಯ ಆರ್ಥಿಕ ಪರಿಸ್ಥಿತಿ ತುಂಬಾ ಕೆಳಸ್ತರದಲ್ಲಿ ಇದ್ದಾಗ ಈ ಪರಿಣಾಮಗಳನ್ನು ನೋಡಬೇಕು."[೪೦] ಇದಕ್ಕೆ ಕುವೆಂಪು ಒಂದು ಮಾತು ಹೇಳುತ್ತಾರೆ. "ನೀವೇನಾದರೂ ಕ್ರೂರಕರ್ಮ ಮಾಡಿದರೆ ಅಥವಾ ಮಾಡಿಸಿಬಿಟ್ಟರೆ ಅದಕ್ಕೆ ತಾನೇ ಹೊಣೆಯಾಗಿ ಕಷ್ಟ ಪರಂಪರೆಗಳನ್ನು ಸಹಿಸಬೇಕಾಗುತ್ತದೆ."[೪೧] ವಿಧಿ ಬರೆದಿದ್ದುದನ್ನು  ತಿದ್ದಲು ಯಾರಿಗೂ ಸಾಧ್ಯವಿಲ್ಲ. ಅವರವರ ಹಣೆಯಲ್ಲಿ ಬರೆದಂತೆ ಆಗುತ್ತದೆ. ಆ ಬಲೆಯಿಂದ ತಪ್ಪಿಸಿಕೊಳ್ಳಲು

ಪ್ರಯತ್ನಪಡುವುದೂ ಆ ಬಲೆಗೆ ಬೀಳುವ ಮಾರ್ಗಗಳಲ್ಲಿ ಒಂದು ಸಂಪ್ರದಾಯ ಆಧುನಿಕತೆಯ ನಡುವೆ ತೊಯ್ದಾಡುವ ಜಾತಿ ವ್ಯವಸ್ಥೆಗೊಂದು ಉತ್ತಮ ಕತೆಯನ್ನು ನೀಡಿದ್ದಾರೆ ಗೌರಮ್ಮ.

ಬ್ರಾಹ್ಮಣರು ಅಥವಾ ಪ್ರಾಯೋಗಿಕ ವರ್ಗ ಕ್ಷತ್ರಿಯರು ಅಥವಾ ಸೈನಿಕ ವರ್ಗ, ವೈಶ್ಯರು ಅಥವಾ ವ್ಯಾಪಾರಿಗಳು, ಶೂದ್ರರು ಅಥವಾ ಶ್ರಮಜೀವಿಗಳು ಎಂಬ ನಾಲ್ಕು ವರ್ಣಗಳಿಂದ ಹಿಂದೂ ಸಮಾಜವು ರೂಪಿತವಾಗಿದೆ ಎಂದು ಅಧ್ಯಯನಗಳಿಂದ ಮತ್ತು ಇರುವ ವ್ಯವಸ್ಥೆಯನ್ನು ಗಮನಿಸಿದಾಗ ಸ್ಪಷ್ಟವಾಗುತ್ತದೆ. ವರ್ಣಪದ್ಧತಿಯಲ್ಲಿ ಯಾವನೇ ವ್ಯಕ್ತಿ ಸೂಕ್ತ ತರಬೇತಿಯನ್ನು ಪಡೆದು ತನ್ನ ವರ್ಣವನ್ನು ಬದಲಾಯಿಸಬಹುದಾಗಿತ್ತು. ಆದರೆ ಒಂದು ಘಟ್ಟದಲ್ಲ ಸಮಾಜದ ಉಳಿದ ಜನರಿಗಿಂತ ದೂರ ಇದ್ದ ಪುರೋಹಿತವರ್ಗ ತಾನೇ ಒಂದು ಜಾತಿಯಾಯಿತು, ಹಾಗೂ ಸೌಲಭ್ಯಗಳ ಒಡೆತನವನ್ನು ತನ್ನದಾಗಿಸಿಕೊಂಡಿತು. ಬೇರೆ ವರ್ಣಗಳಲ್ಲಿ ಸಮಾಜ ವಿಭಜನೆಯ ನಿಯಮಗಳ ವ್ಯತ್ಯಾಸಗೊಂಡು ಅವು ಸಣ್ಣ ಮತ್ತು ದೊಡ್ಡ ಗುಂಪುಗಳಾಗಿ ಒಡೆದವು. ವೈಶ್ಯರು ಮತ್ತು ಶೂದ್ರ ವರ್ಣಗಳು ಅಸಂಖ್ಯಾತ ಜಾತಿಗಳಿಗೆ ಮೊದಲಾದವು ಆದರೆ ಕಾಲಾನಂತರ ಈ ಗುಂಪುಗಳು ಸ್ವತಂತ್ರಗೊಂಡ ಜಾತಿಗಳಾದವು.

"ಇದು ಬ್ರಾಹ್ಮಣರಿಂದ ಮೊದಲುಗೊಂಡು ಬ್ರಾಹ್ಮಣೇತರ ವರ್ಗಗಳಿಂದ ಹೃದಯಪೂರ್ವಕ ವಾಗಿ ಸ್ವೀಕರಿಸಲ್ಪಟ್ಟಿತು. ಇದು ಅನುಕರಣೆಯ ಅಂಚುರೋಗೆ ಎಲ್ಲಾ ಉಪಗುಂಪುಗಳು ತಾರತಮ್ಯದ ಕಡೆಗೆ ನಡೆದು ಜಾತಿಗಳಾಗಿ ಮಾರ್ಮಿಜ್ಯವು"[೬೨]. ಭಾರತದಲ್ಲಿನ ಜಾತಿಗಳಲ್ಲಿ ಬ್ರಾಹ್ಮಣರನ್ನು ದೇವರುಗಳೆಂದು ಪರಿಗಣಿಸಲಾಗಿದೆ. ಇತರ ಜೀವನ ವಿಧಾನ ಮತ್ತು ಇತ್ಯಾದಿಗಳನ್ನು ನಿರ್ಧರಿಸುವವರು ಆತನೇ ಆಗಿರುತ್ತಾನೆ. ಈತನ ಕಾರಣದಿಂದಾಗಿ ಹಿಂದೂ ಸಮಾಜದ ಎಲ್ಲ ಜಾತಿಗಳಲ್ಲಿ ಸತಿ ಪದ್ಧತಿ. ಶಾಶ್ವತ ವೈವಿಧ್ಯ ಹೆಣ್ಣಿನ ಬಾಲ್ಯ ವಿವಾಹ ಕಾಣಿಸಿಕೊಂಡಿತು.

ಶಿಕ್ಷಣ ಆಸ್ತಿಯ ಹಕ್ಕು ಇರುವ ಮತ್ತು ಈ ಯಾವುದೇ ಹಕ್ಕುಗಳನ್ನು ಹೊಂದಿರುವ ದೈಹಿಕ ಶ್ರಮವನ್ನು ಬಳಸಿಕೊಂಡು ಬದುಕಬೇಕಾದ ಕೆಳವರ್ಗ ಸೃಷ್ಠಿಯಾಯಿತು. ನಂತರದಲ್ಲಿ ಬ್ರಾಹ್ಮಣರು ಆ ಪದ್ಧತಿಗಳಲ್ಲಿ ಕೆಲವನ್ನು ಬಿಟ್ಟರೂ, ಮಿಕ್ಕವರು ಬಿಡಲಿಲ್ಲ, ಜಾತಿಯ ಈ ನಿಯಮಗಳಿಗೆ ವಿರುದ್ಧವಾಗಿ ಸಾಗುವವರನ್ನು ಜಾತಿಯಿಂದ ಹೊರಹಾಕುತ್ತಿದ್ದರೂ, ಜಾತಿಯೇ ಮುಖ್ಯವಾಗಿದ್ದರಿಂದ ಅತ್ಯಂತ ಕ್ರೂರ ನಿಯಮಗಳಿಂದ ಪ್ರತಿಭಟನೆಯನ್ನೇ ಮೊಟಕುಗೊಳಿಸಲಾಗುತ್ತಿತ್ತು ಹಾಗೂ ಅಸ್ಪೃಶ್ಯ ಮತ್ತು ಸ್ಪೃಶ್ಯ ಎಂಬ ಅಂತರಗಳನ್ನು ನಿರ್ಮಾಣ ಮಾಡಿತು.

"ಹೀಗೆ ಸಮಾಜದಲ್ಲಿ ಬೇರೂರಿರುವ ಜಾತಿ ವ್ಯವಸ್ಥೆಯ ತನ್ನ ಕರಾಳ ಸ್ವರೂಪವನ್ನು ತೋರಿದೆ, ಸೌಲಭ್ಯಕಾಂಕ್ಷಿಗಳಾದ ಮೇಲ್ಜಾತಿಯವರು ಕೆಳಜಾತಿಯವರನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುತ್ತ ಶೋಷಿಸಿದ್ದಾರೆ"[೪೩.] ಎಷ್ಟೋ ಸಂದರ್ಭಗಳಲ್ಲಿ ಈ ಶೋಷಣೆಯನ್ನು ಅವರು ಮುಗ್ಧರಾಗಿ ಸ್ವೀಕರಿಸಿ ತಮ್ಮ ನಿಷ್ಠೆಯನ್ನು ಪ್ರದರ್ಶಿಸಿದ್ದಾರೆ. ಈ ಜಾತಿಪದ್ಧತಿಯ ಹಲವು ನೆಲೆಗಳನ್ನು ಸಮಾಜದಲ್ಲಿ ಅದು ಹೂಡಿರುವ ವಾಸ್ತವ್ಯಗಳನ್ನು ಕೊಡಗಿನ ಗೌರಮ್ಮನವರ ಕತೆಗಳ ಹಿನ್ನೆಲೆಯಲ್ಲಿ ನೋಡಬಹುದಾಗಿದೆ.

"ಅಪರಾಧಿ ಯಾರು?" ಎಂಬ ಕತೆಯಲ್ಲಿ ಜಾತಿ–ಮತ ತರಲಾಗಿದೆ. ಅದು ಕತೆಗೆ ಅಗತ್ಯವೂ ಆಗಿದೆ. "ಪಾಪನ ಮದುವೆ" ಯಲ್ಲಿ ಜಾತಿ ವಿರುದ್ಧ ಇದ್ದು ಅದು ಮುಖ್ಯ ಕತೆ ಏನೆಲ್ಲಿ? ಕತೆಯನ್ನು ಪತ್ರ ವ್ಯವಹಾರದ ಮೂಲಕ ನಿರೂಪಿಸಲಾಗಿದೆ. ಬ್ರಾಹ್ಮಣ ವಿಧವೆ ಮುಸ್ಲಿಂ ಧರ್ಮ ಸೇರುವುದು ಇಲ್ಲಿನ ವಸ್ತು, ತಮ್ಮ ನೀಚತನ ಮುಚ್ಚಿಕೊಳ್ಳಲು ಮತದ ಮೊರೆಹೋಗುವ ಗಂಡಸರ ಕುತಂತ್ರ ಎಷ್ಟು ಚೆನ್ನಾಗಿ ಕತೆಯಲ್ಲಿ ಮೂಡಿದೆ ಎಂದರೆ ಅದನ್ನು, ಪಾರ್ವತಿ : ಬ್ರಾಹ್ಮಣ ಜಾತಿಗೆ ಸೇರಿದ ಯುವವಿಧವೆ ಹಾಗೂ ಒಂದು ಮಗುವಿನ ತಾಯಿ, ತಮ್ಮ ಮನೆಯಲ್ಲಿ ಊಳಿಗಕ್ಕಿದ್ದ ಪಾರ್ವತಿಯನ್ನು ಆಕೆಯ ಮೇಲಿನ ತನ್ನ ಆರ್ಥಿಕ ಹಿಡಿತ ಬಳಸಿ ಸುಖಿಸಿದ ನಾಗೇಶರಾಯರು ಗರ್ಭಿಣಿ ಆದ ನಂತರ ಜಾತಿಯಿಂದ ಆಕೆಯನ್ನು ಹೊರಹಾಕಿಸುತ್ತಾರೆ. ಮಗುವಿನ ಸಮೇತ ಆತ್ಮಹತ್ಯೆಗೆ ಯತ್ನಿಸಿದ ಪಾರ್ವತಿಯನ್ನು ಮುಸ್ಲಿಂ ಸ್ನೇಹಿತ ಬಚಾವ್ ಮಾಡಿದಾಗ ಬೇರೆ ದಾರಿಯೇ ಕಾಣದ ಪಾರ್ವತಿ ರಾಜೀ ಆಗಬೇಕಾಗುತ್ತದೆ.

"ಮೊನ್ನೆ ಹಿಂದೂ ರಮಣಿಯೊಬ್ಬಳು ಮುಸಲ್ಮಾನ್ ಧರ್ಮ ಸ್ವೀಕರಿಸಿದ್ದು, ಊರಿನ ಹಿಂದೂಗಳಿಗೆಲ್ಲ ಬಹಳ ವಿವಾದವನ್ನುಂಟು ಮಾಡಿದೆ"[೪೪] ಇನ್ನು ಮುಂದೆ ಈ ರೀತಿ ಸಂಭವಿಸದಂತೆ ನೋಡಿಕೊಳ್ಳುವುದಕ್ಕಾಗಿ ಊರಿನ ಪ್ರಮುಖ ಹಿಂದೂಗಳ ಸಭೆಯೊಂದು ಶ್ರೀಮಾನ್ ನಾಗೇಶರಾಯರ ಅಧ್ಯಕ್ಷತೆಯಲ್ಲಿ ನಡೆಯಿತು. ಸಭೆಯಲ್ಲಿ ಸರ್ವಾನುಮತದಿಂದ ಹಿಂದೂ ಧರ್ಮದ ರಕ್ಷಣೆ ಮಾಡಬೇಕೆಂದು ತೀರ್ಮಾನವಾಯಿತು.

ಪಾರ್ವತಿಯ ದುರಂತಕ್ಕೆ ನಾಗೇಶರಾಯರೇ ಕಾರಣ ಎಂಬುದನ್ನು ಗೌರಮ್ಮ ಮತ್ತೆ ಮತ್ತೆ ನೆನಪಿಸುತ್ತಾರೆ. ರಾಜಿಯ ಆಗಿಯಾದರೂ ಅವಳ ಜೀವನವು ಸುಖಮಯವಾಗಿರಲೆಂದು ದೇವರಲ್ಲಿ ನನ್ನ ಬೇಡಿ ಎಂದು ಕತೆಯಲ್ಲಿ ಪ್ರಾರ್ಥಿಸಲಾಗುತ್ತದೆ. ಗೌರಮ್ಮನವರು ಎಂತಹ ವಿಶಾಲ

ಮನೋಭಾವ ಪರಂಪರೆಯಿಂದ ಬಂದು ಜಾತಿ ವ್ಯವಸ್ಥೆಯನ್ನು ನಾವು ಆಧುನಿಕ ಪ್ರಪಂಚದಲ್ಲಿ ಕಣ್ಣಿಗೆ ಕಾಣುವಂತೆ ಗೌರಮ್ಮ ಕಟ್ಟಿಕೊಂಡಿದ್ದಾರೆ, "ಭಾರತೀಯ ನೆಲೆಯಲ್ಲಿ ವರ್ಗ ಸಂಘರ್ಷ ಜಾತಿ ಸಂಘರ್ಷದ ಒಂದು ಭಾಗವಾಗಿಯೇ ನಡೆದಿದೆ. ಇತಿಹಾಸವನ್ನು ಗಮನಿಸಿದಾಗ ವರ್ಗ ಸಮಾನೇತರಾಗಿ ಅನೇಕ ದೇಶಗಳಲ್ಲಿ ಹೋರಾಟಗಳು ನಡೆಯುವುದು ಕಂಡುಬರುತ್ತದೆ. ಫ್ರಾನ್ಸಿನ ಮಹಾಕ್ರಾಂತಿ ಸ್ವತಂತ್ರ್ಯ ಸಮಾನತೆ ಭ್ರಾತೃತ್ವಕ್ಕಾಗಿ ಸಂಭವಿಸಿದರೆ ರಷ್ಯಾದಲ್ಲಿ ಕಾರ್ಮಿಕ ಕ್ಷೇತ್ರ ಹಾಗೂ ಸಮಾನತೆಗಾಗಿ ಹೋರಾಟ ಆರಂಭಿಸಿದರು. ಅಂಬೇಡ್ಕರರು ಬ್ರಿಟೀಷರ ದುಂಡುಮೇಜಿನ ಪರಿಷತ್ತಿನಲ್ಲಿ ಇಂಡಿಯಾದಲ್ಲಿ ಬಂಡವಾಳಷಾಹಿಗಳು ಕಾರ್ಮಿಕ ವರ್ಗವನ್ನು ಶೋಷಿಸುತ್ತಿದ್ದಾರೆ.

ಭೂ ಮಾಲೀಕರು ಬಡ ಕೃಷಿ ಕಾರ್ಮಿಕರರನ್ನು ಹಿಂಡುತ್ತಿದ್ದಾರೆ. ಉತ್ತಮ ವರ್ಗದವರನ್ನು ದಲಿತರನ್ನು ಅಸಹನೀಯವಾಗಿ ಹಿಂಸಿಸುತ್ತಿದ್ದಾರೆ. ನಮಗೆ ಎಲ್ಲರ ಹಕ್ಕುಗಳನ್ನು ರಕ್ಷಿಸುವ ಸರ್ಕಾರ ಬೇಕು ಎನ್ನುತ್ತಾರೆ. ಮೊದಲೇ ಹೇಳಿದಂತೆ ಭಾರತದಲ್ಲಿ ಮೇಲ್ಜಾತಿಯವರೆಂದರೆ ಉತ್ತಮ ವರ್ಗದವರು ಶ್ರೀಮಂತರು ಎಂದರೆ ಕೆಳ ವರ್ಗದವರು ಬಡವರು ಎಂದು ಅಂಬೇಡ್ಕರರು ಬುದ್ದನ ಬಗ್ಗೆ ಹೇಳುತ್ತಾ ಅವನು ತನ್ನ ತತ್ವಜ್ಞಾನದ ಮೂಲಕ ವಿಶ್ವಪರಿವರ್ತನೆಗೆ ಪ್ರಯತ್ನಿಸುತ್ತಿದ್ದನು' ಎಂದು ದಾಖಲಿಸುತ್ತಾರೆ. ಹಾಗೆಯೇ ಕಾರ್ಲ್ಸ್‌ಮಾರ್ಕ್ಸ್ ವರ್ಗ ವ್ಯವಸ್ಥೆ ಬಗೆಗೆ ಹೇಳುವ ಮೊದಲೇ ಬುದ್ಧ ಹೇಳಿದ್ದ ಎನ್ನುತ್ತಾರೆ. "ಅಂಬೇಡ್ಕರ್‌ರು ತಮ್ಮ ಬರಹದಲ್ಲಿ ಬುದ್ದನನ್ನು ಗುರುತಿಸುತ್ತ ಧರ್ಮಗಳ ಬಗ್ಗೆ ಬುದ್ಧನ ವೈಯಕ್ತಿಕ ಧೋರಣೆ ಏನೆಂದರೆ ಅವನ ಅಷ್ಠಾಂಗ ಮಾರ್ಗ ತತ್ವವು ಇದೆ"[೪೫] ಎಂದು ಪರಂಪರೆ ಮತ್ತು ಆಧುನಿಕ ಮುಖಾಮುಖಿ ಗೌರಮ್ಮ ಕತೆಯಲ್ಲಿ ನೋಡಬಹುದು.

048943

"ಮುನ್ನಾದಿನಾ" ಪರಂಪರೆಯನ್ನು ಮುರಿದ್ದು, ತನಗೆ ಬೇಕಾದ್ದನ್ನು ಪಡೆಯುವುದಕ್ಕೆ ನಾಯಕ ಯಾವುದನ್ನು ಬೇಕಾದರೂ ಬಿಡುವುದಕ್ಕೆ ರೆಡಿಯಾಗಿರುತ್ತಾನೆ. ಯಾವುದೇ ಮಿತ ಮತ್ತು ಧರ್ಮವನ್ನು ಒಪ್ಪಿಕೊಳ್ಳದೆ, ಯಾವ ಧರ್ಮದಲ್ಲಿ ನಂಬಿಕೆಯನ್ನು ಹೊಂದಿರುವ ನಾಯಕ ಅವನ ಆಯ್ಕೆ ಅವನ ಧರ್ಮವಾಗುತ್ತೆ. ಮುನ್ನಾದಿನ ಕಾಡಮೇಸ್ತ್ರಿ', "ಮಹಾತ್ಮ ಗಾಂಧೀಜಿಯವರ ತತ್ವಾಚರಣೆಯಲ್ಲಿ ಅಸಕ್ತಿಯನ್ನರಿಸಿಕೊಂಡ ವ್ಯಕ್ತಿ ಮತ್ತು ಪ್ರಸ್ತುತ ಕಂಡ ಅತಂತ್ರನಾಗಿದ್ದ, ಹೀಗಾಗಿ ಮನುಷ್ಯ ತನ್ನ ನೆಲೆ ಕಂಡುಕೊಳ್ಳಬೇಕಾದರೆ ಜಾತಿ ಮುಖ್ಯವಲ್ಲ"[೪೬] . ಈ ದಿಸೆಯಲ್ಲಿ ತನ್ನ ಜೀವನ ನೆಲೆಗಾಗಿ ಹಿಂದೂ ಧರ್ಮಬಿಟ್ಟು ತನ್ನ ಒಡೆಯನ ಅಂದ್ರೆ ಕೆಲಸ ಕೊಟ್ಟ ಕ್ರಿಶ್ಚಿಯನ್ನನಿಗೆ ಹೊಂದಿಕೊಂಡ ಕ್ರಿಶ್ಚಿಯನ್ನನಾದ ಹಾಗೆಯೇ ಬೆಳೆದು ದೊಡ್ಡವನಾದ, ಒಡೆಯನ ಇಚ್ಚೆಯನ್ನು ಪೂರೈಸಿದ ಕಾಡ ಒಡೆಯನ ಭಾಷೆ ಇಂಗ್ಲೀಷನ್ನು ಕೂಡ ಮಾತಾಡಲು ಕಲಿತುಕೊಂಡ. ಮುಂದೆ

ಬೆಳೆಮುಕೊಂಡಂತೆ ಮುಸ್ಲೀಮರ ಹುಡುಗಿಯ ಸಂಪರ್ಕ ಬರುತ್ತದೆ. ಬೀಡಿ ಸೇದುವ ಪಟಗಾರನಾಗಿರುವುದರಿಂದ ಮುಸ್ಲಿಂರ ಬೀಡಿ ಅಂಗಡಿಯ ಮಾಲೀಕಳಾದ ಹುಸೇನಬಿಯೊಂದಿಗೆ ಸ್ನೇಹ ಬೆಳೆದು, ಅದು ಪ್ರೇಮವಾಗಿ ಪರಿವರ್ತನೆಗೊಂಡು, ಆಕೆಯ ಅಣ್ಣನೂ ಈತನ ಸ್ವಭಾವಕ್ಕೆ ಹೊಂದಿಕೊಂಡು ಮುಸ್ಲಿಂ ಧರ್ಮ ಸೇರುವುದು ಹುಸೇನನಿಗೆ ಖಾತ್ರಿಯಾಯಿತು. ಹಾಗೆಯೇ ಕ್ರಿಶ್ಚಿಯನ್‌ನಾಗಲು ಕೂಡ ಸಂತೋಷ ಪಟ್ಟು ಜೀವನವನ್ನು ಬದುಕುವುದಕ್ಕೆ ಹೃದಯವಂತಿಕೆ ಬೇಕು, "ಜಾತಿಯಲ್ಲಿ ಹೀಗೆ ಮನುಷ್ಯನಾಗಿ ಬಾಳಬೇಕಾದರೆ ಮಹಾತ್ಮ ಗಾಂಧೀಜಿ ತತ್ವಗಳು ಸಾಕಾರಗೊಳ್ಳುತ್ತಿವೆ ಜಾತಿ ಮನುಷ್ಯನಿಗೆ ಅಮುಖ್ಯ"[೪೭.]

"ಮನುವಿನ ರಾಣಿ" ಇಲ್ಲಿ ಪರಂಪರೆಯನ್ನು ಮುಂದುವರೆಸಿಕೊಂಡು ಆಧುನಿಕ ಪ್ರಪಂಚದಲ್ಲಿ ವಾಸ್ತವದಲ್ಲಿ ಸಂಗತಿಗಳನ್ನು ಒಪ್ಪಿಕೊಳ್ಳಬಹುದು. ಸುಶಿಕ್ಷಿತರಲ್ಲಿ ಸೂಳೆಯರ ಬಗ್ಗೆ ಇರುವ ಪೂರ್ವಗ್ರಹ ಪೀಡೆ ಮತ್ತು ಸೂಳೆಯಲ್ಲಿರುವ ಕಟುಕುತನ ಮತ್ತು ಸಹೃದಯತೆ ಎರಡನ್ನೂ ತುಂಬಾ ಮಾರ್ಮಿಕವಾಗಿ ಬಿತ್ತರಿಸುವ ಕತೆಯಿಂದ ದುಡ್ಡಿದ್ದವನನ್ನು ಸುಲಿದುಕೊಂಡು, ಬಿಡುವುದು ಸೂಳೆಯರ ಕೆಲಸವಾದರೂ ಮಾನವೀಯತೆಯಿಂದ ರಾಜಮ್ಮನ ಹೃದಯವಂತಿಕೆ ಮತ್ತು ಅವಳ

ತಾಯಿಯ ಸೂಳೆ ವೃತ್ತಿಯ ಮಾನವೀಯತೆ ಈ ಕತೆಯ ತಾತ್ಪರ್ಯವಾಗಿದೆ. 'ಮನುವಿನ ರಾಣಿ' ಒಂದು ಮನ ಮಿಡಿಯುವ ಅತ್ಯುತ್ತಮ ಕತೆಯ ಸಾಲಿಗೆ ಸೇರುತ್ತದೆ. ಈ ಕತೆಯ ಓದುಗರನ್ನು ಭಾವಪರವಶಗೊಳಿಸುತ್ತದೆ. ಇಲ್ಲಿ ಕೂಡ ಪರಂಪರೆ ಮತ್ತು ಆಧುನಿಕತೆ ಮುಖಾಮುಖಿಯಾಗಿದೆ.

"ಯಾರು?" ಗೌರಮ್ಮನವರ ಕತೆಗಳಲ್ಲಿ ಹಿಂದಿ ಸಾಹಿತ್ಯರು ಲಾಯ ಇದೆ. ಅವಳಲ್ಲಿ ಹಿಂದಿ ಭಾಷೆಯಲ್ಲಿ ಆಸಕ್ತಿಯಿತ್ತು ಎನ್ನಲು ಈ ಕತೆ ಸಾಕ್ಷಿಯಿದೆ. ಮಹೇಶ ಮತ್ತು ವಸಂತ ಇಬ್ಬರೂ ಸ್ನೇಹಿತರು ಕೂಡ ಓದುವ ವಿದ್ಯಾರ್ಥಿಗಳು. ಮಹೇಶ ಹುಡುಗಿಯೊಬ್ಬಳ ಸಂಗಡ ಅದುವೇ ಹೆಸರಾಂತ ಸಿನಿಮಾ ನಟಿಯೊಂದಿಗೆ ಇರುವುದು ಕಂಡು, ತುಂಬಾ ಬೇಸರಗೊಂಡ, ಹೀಗಾಗಿ ತನ್ನ ಗೆಳೆತನಕ್ಕೆ ಸೂಕ್ತತ್ವ ಮಹೇಶ ಅಲ್ಲಿ ಎಂಬ ಅಭಿಪ್ರಾಯಕ್ಕೆ ಬಂದು ಅವನಿಗೊಂದು ಪತ್ರ ಬರೆದು, ಇನ್ನು ನನ್ನನ್ನು ನೀನು ಮಾತನಾಡಿಸಬೇಡ ಎಂದು ಬರೆದಿದ್ದ? ವಸಂತ ಈತನ ಪತ್ರ ಓದಿ ತನ್ನ ಜೀವಂತ ವೃತ್ತಾಂತವನ್ನು, ಬರೆದುಕೊಂಡು ಜೀವನ ವೃತ್ತಾಂತದಲ್ಲಿರುವ ಅಣ್ಣ–ತಂಗಿಯ ಸಂಬಂಧ ಮತ್ತು ಬಾಲಿಕೆಯಾಗಿರುವಾಗ ಮದುವೆಯಾದ ಸಂಗತಿ ಈ ಮದುವೆಗೆ ಒಪ್ಪಿಕೊಂಡ, ರಾಮಚಂದ್ರ

ವಿದೇಶದಲ್ಲಿ ಕಲಿಯುವುದಕ್ಕೋಸ್ಕರ ಇವರ ಆರ್ಥಿಕ ಸಹಾಯ ಪಡೆದುಕೊಳ್ಳುವುದಕ್ಕಾಗಿ ಮಾತ್ರ ಈ ಮದುವೆ ಎಂದುಕೊಂಡ, ಆತನ ದುಷ್ಟತನ ತಿಳಿದುಕೊಂಡ ಮಹೇಶ ಇದನ್ನೆಲ್ಲ ವಸಂತನಿಗೆ ಪತ್ರ ಬರೆದು ತಿಳಿಸುತ್ತಾನೆ.

ಕೇವಲ ಶಿಕ್ಷಣಕ್ಕೆ ಆರ್ಥಿಕ ಸಹಾಯಕ ಆಸೆಯಲ್ಲಿ ಒಬ್ಬ ಹೆಣ್ಣಿಗೆ ಅಥವಾ ಹೆಂಡತಿಯಾದ ಹೆಂಗಸಿಗೆ ಮೋಸ ಮಾಡುವ ಗಂಡನ ರೀತಿ ನೇರ ಕೆಟ್ಟದಾಗಿದೆ ಮತ್ತು ತಾನು ಕಲಿತು ಪ್ರೊಫೆಸರಾಗಿದ್ದು, ಮತ್ತೆ ತಿರುಗಿ ಸ್ವದೇಶಕ್ಕೆ ಬಂದರೂ ಹೆಂಡತಿಯ ಸುಖ ಬಯಸದೆ, ಮತ್ತೊಬ್ಬಳನ್ನು ಮದುವೆ ಮಾಡಿಕೊಂಡು ಸುಖಿಸುವ ಇಂಥ ಮನುಷ್ಯ ಮಾನವ ಕುಲಕ್ಕೆ ಪುರುಷ ಪ್ರಪಂಚಕ್ಕೆ ಅನ್ಯಾಯ ಮಾಡಿದಂತೆಯೂ ಗಂಡನ ಮೇಲೆ ಜೀವನವನ್ನು ಮುಡುಪಾಗಿಟ್ಟುಕೊಂಡು ಬದುಕುವ ಹೆಣ್ಣಿನ ಬದುಕನ್ನು ಸಮಾಜ ಕಾಣುವ ರೀತಿ ತುಂಬಾ ವಿಚಿತ್ರವಾದುದು. ಮಹೇಶ ತಂಗಿಯ ಇಂಥ ಸ್ಥಿತಿಯಲ್ಲಿ ಅವಳಲ್ಲಿರುವ ಸುಪ್ತ ಪ್ರತಿಭೆ ಗಾಯನದ ಕಂಠಸಿರಿ, ಅವಳನ್ನು ಹೆಸರಾಂತದ ಉತ್ತುಂಗಕ್ಕೆ ಒಯ್ಯುತ್ತದೆ.

ಅಭಿನೇತ್ರಿಯಾಗಿ ಹೆಸರು ಮಾಡುತ್ತಾಳೆಂದು ಸಮಾಜ ಭ್ರಮಿಸುತ್ತದೆ. ಇಂಥ ಸಮಾಜ ನಡುವೆ ತಂಗಿಯನ್ನು ಬಲ್ಲ ಅಣ್ಣನ ಆಶ್ರಯ ನೈತಿಕದಾಗಿದ್ದರೂ ಅಂಥ ತಂಗಿಯ ಆದಾಯದಲ್ಲಿ ಅಣ್ಣನಿಗೆ ಶಿಕ್ಷಣ ಕೊಡಿಸುವ ತಂಗಿಯ ಹಿರಿಮೆ ಅಪರೂಪ, ಅವಳ ತಂದೆ ತನ್ನ ಸರ್ವಸ್ವವನ್ನು ಮಗಳು ಪಾಪಳ ಗಂಡ ರಾಮಚಂದ್ರರಾಯನಿಗೆ ಧಾರೆಯೆರೆದು, ವಿದೇಶದಲ್ಲಿಟ್ಟು ಓದಿಸಿದ ಅಳಿಯ ತನ್ನ ಮಗಳಿಗೆ ಕೈಕೊಟ್ಟ ಕೊರಗಿನಲ್ಲಿ ಪ್ರಾಣ ಬಿಡುತ್ತಾನೆ. ಸ್ವತಃ ತನ್ನ ಮಗ ಮಹೇಶನಿಗೆ ಶಿಕ್ಷಣ ಕೊಡಿಸಲಾಗದ ತಂದೆಯ ಜವಾಬ್ದಾರಿಯನ್ನು ಮಗಳು ನಿರ್ವಹಿಸುತ್ತಾಳೆ. ತಾನು ಮಾತ್ರ ಇಡೀ ಜೀವನ ತುಂಬಾ ಕೊರಗುತ್ತಾನೆ. ಸಮಾಜವನ್ನು ತನ್ನ ಅಭಿನಯ ಮತ್ತು ಸುಶ್ರಾವ್ಯ ಕಂಠದಿಂದ ತಣಿಸುತ್ತಾಳೆ. ಹೆಣ್ಣು ನಿರಂತರ ಅನ್ಯಾಯಕ್ಕೊಳಗಾಗುತ್ತಾಳೆ. ಗಂಡು-ಹೆಣ್ಣಿಗೆ ಅನ್ಯಾಯ ಮಾಡುತ್ತಾನೆ ಎನ್ನುವುದು ಇಡೀ ಸಮಾಜದ ಕೃತಾರ್ಥವಾಗಿದೆ.

ನಮ್ಮ ಸಮಾಜದಲ್ಲಿ ಪತಿಯಿಂದ ತಿರಸ್ಕೃತೆಯಾದ ಪತ್ನಿ ಎಂದರೆ ಎಲ್ಲರಿಗೂ ಸಂಶಯ ಸಮಾಜದ ಕ್ರೂರ ನಾಲಿಗೆ ಪಾಪವನ್ನು ಟೀಕಿಸಿರಲಿಲ್ಲ ಎನ್ನುವ ಮಹೇಶನ ಮಾತು ತನ್ನ ತಂಗಿಯ ಕುರಿತಾದ ವಿಶ್ವಾಸಕ್ಕೆ ಸಂಬಂಧಿಸಿರುವುದಾಗಿದೆ. ಅದೇಣಕ್ಕೆ ಬಗ್ಗುವ ಮಾತು ಅಂದುಕೊಳ್ಳಬಹುದು. ಆದರೆ ಕಾಮದ ಸತ್ಯದ ಬಗ್ಗೆ ಮಾತನಾಡುವುದಾದರೂ ಸಮಾಜದ ತಿಳುವಳಿಕೆ ಶತಸಿದ್ಧವಾದುದು.

ಒಬ್ಬನ ಮಾತು ಹತ್ತಾರು ಜನರ ಅಭಿಮಾನದಿಂದ ತುಂಬಾ ದೂರವಿರುವುದಾಗಿದೆ. ಕಾಮ ಕಂಡ ಸತ್ಯ ಅದನ್ನು ಗೆಲ್ಲುವುದು ಅಸಾಧ್ಯ ಅಷ್ಟು ಸರಳವಾಗಿ ಸ್ವೀಕರಿಸಲಾಗದು. ಅದು ಪ್ರಕೃತಿಯ ಪರಮಸತ್ಯ. ಮಾನವನ ತಿಳುವಳಿಕೆಯನ್ನು ಮೀರಿದುದಾಗಿದೆ. ಪರಿತ್ಯಕ್ತಯಾಗದ ಹಾಗೆ ನಿಗಾವಹಿಸಿ ಬಾಳುವೆ ಮಾಡುವುದು ಹೆಣ್ಣಿಗೆ ಗೊತ್ತಿದ್ದರೂ ಪುರುಷ ದೌರ್ಜನ್ಯ ಈ ಸ್ಥಿತಿಗೆ ತರುತ್ತಿದೆ.

ಪ್ರಾಯಶ್ಚಿತ್ತ ಪ್ರೇಮ ಜಯಿಸುತ್ತದೆ. ಇಲ್ಲದೆ ಪುರುಷ ದೌರ್ಜನ್ಯಕ್ಕೆ ಬಲಿಯಾಗುತ್ತಿದೆ. ಮಗನ ತಪ್ಪಿಗೆ ಗಂಡ-ಹೆಂಡತಿಯನ್ನು ತರಾಟೆಗೆ ತೆಗೆದುಕೊಳ್ಳುತ್ತಾನೆ. ಪುರುಷ ತನ್ನ ತನ್ನ ಜವಾಬ್ದಾರಿಯನ್ನು ಹೆಂಡತಿಯ ಮೇಲೆ ಹಾಕಿ ಅವಳನ್ನು ಶಿಕ್ಷಿಸುತ್ತಾನೆ. ಮಗನಿಗೆ ಬುದ್ಧಿ ಹೇಳುವ ಅಧಿಕಾರದ ತಾಯಿಯದ್ದು ಮಾತ್ರವೆಂದು ತಂದೆ ಭಾವಿಸುತ್ತಾನೆ. ನಳಿನಾ ತಾಯಿ ಆತ್ಮಹತ್ಯೆ ಮಾಡಿಕೊಂಡಿರುತ್ತಾಳೆ. ಅದಕ್ಕೆ ಕಾರಣನಾದವನ ಮಗನ ಹೆಂಡತಿಯಾಗಿ ಅವಳ ಮಗಳು (ನಳಿನಿ) ಮನೆಗೆ ಬರುವುದು ತಂದೆಗೆ ಇಷ್ಟವಿರುವುದಿಲ್ಲ. ಆದರೂ ಮಗ ಪ್ರೇಮಿಸಿ ಮದುವೆ ಮಾಡಿಕೊಳ್ಳುತ್ತಾನೆ.

ತಾಯಿಯ ಒಪ್ಪಿಗೆ ಇರುತ್ತದೆ. ನಳಿನಿಯನ್ನು ಪ್ರೇಮಿಸಿ ಮದುವೆ ಮಾಡಿಕೊಳ್ಳುತ್ತಾನೆ. ತಾಯಿಯ ಒಪ್ಪಿಗೆ ಇರುತ್ತದೆ. ನಳಿನಿಯ ತಾಯಿಯ ಆತ್ಮಹತ್ಯೆಗೆ ತಾನು ಕಾರಣನಾಗಿರುತ್ತೇನೆನ್ನುವುದು ತಂದೆಯ ಪಶ್ಚಾತಾಪಕ್ಕೆ ಕಾರಣವಾಗುತ್ತದೆ. ನಳಿನಿ ಸೊಸೆಯಾದ ಸುದ್ಧಿ ತಿಳಿದ ಕೂಡಲೇ ಮಗನಿಗೆ ತಂದೆ ಪತ್ರ ಬರೆಯುತ್ತಾನೆ. ಹೆಚ್ಚು ವಿವರವನ್ನು ತಿಳಿದುಕೊಳ್ಳಲು ಇಚ್ಛಿಸದಿದ್ದರೂ ಓದುಗನ ಸಂಕಲ್ಪಕ್ಕೆ ನಳಿನಿಯ ತಾಯಿ ಮತ್ತು ನಳಿನಿಯ ಗಂಡನ ನಡುವೆ ಅನುಮಾನಗಳು ಹುಟ್ಟದೇ ಇರಲಾರದು. ನಳಿನಿಯ ತಾಯಿಯ ಆತ್ಮಹತ್ಯೆಗೆ (ಗಂಡ) (ಮೂರ್ತಿ)ನ ಅನೈತಿಕತೆಯೋ, ಅವ್ಯವಹಾರವೋ ಕಾರಣವಾಗಿರುವುದಂತೂ ನಿಶ್ಚಿತ, ಪ್ರಾಯಶ್ಚಿತ್ತ ಶೀರ್ಷಿಕೆಯ ಅಂತರಂಗ ಮತ್ತು ಅಂತರಾಳ ತಂದೆಯೇ ಆಗುತ್ತಾನೆ. ಮೂರ್ತಿಯ ಸಣ್ಣ ತಪ್ಪಿಗೂ ತಂದೆ ತಾಯಿಯನ್ನು ದಂಡಿಸುತ್ತಿದ್ದ ಮಗನಿಗೆ ಏನೂ ಹೇಳುತ್ತಿರಲಿಲ್ಲ. ಇದರ ತಾತ್ಪರ್ಯ ಮಕ್ಕಳ ಭವಿಷ್ಯದ ತಾಯಿಯೋ ಹೊಣೆಗಾರಳು ತಂದೆಯಲ್ಲ, ಎನ್ನುವುದು ಮಕ್ಕಳ ಭವಿಷ್ಯದ ಸಂಕಲ್ಪ ತಾಯಿ-ತಂದೆ ಇಬ್ಬರೂ ಆಗಿರಬೇಕು. ಮಗನ ಅಭ್ಯುದಯದ ಸಂಕಲ್ಪಕ್ಕೆ ನಿಲ್ಲಬೇಕು. ತಂದೆ-ತಾಯಿಯ ಅಲವಂಬನೆಯಿಂದ ಈ ರೀತಿಯೂ ವ್ಯವಸ್ಥೆಗೊಂಡ ಕುಟುಂಬಗಳು ಆಧುನಿಕ ವ್ಯವಸ್ಥೆಯಲ್ಲಿ ನೋಡಬಹುದು.

ಕೊನೆ ಟಿಪ್ಪಣಿ:

೩೧) ಬರಗೂರು ರಾಮಚಂದ್ರಪ್ಪ, ಸಂಸ್ಕೃತಿ : ಶ್ರಮ ಮತ್ತು ಸೃಜನಶೀಲತೆ ಪುಟ : 163

೩೨) ಪ್ರೊ. ಕೇಶವಶರ್ಮ, ಸ್ತ್ರೀವಾದಿ ಚಿಂತನೆಗಳು : ಪುಟ 424

೩೩) ಬರಗೂರು ರಾಮಚಂದ್ರಪ್ಪ : ಸಂಸ್ಕೃತಿ: ಶ್ರಮ ಮತ್ತು ಸೃಜನಶೀಲತೆ – ಪುಟ–12

೩೪) ಕೊಡಗಿನ ಗೌರಮ್ಮ ಎಚ್.ನಾಗವೇಣಿ, ಪುಟ–51

೩೬) ದಿ. ಕೊಡಗಿನ ಗೌರಮ್ಮನ; ಸಮಗ್ರ ಸಣ್ಣ ಕಥೆಗಳು– ಪುಟ–113 ಪ್ರಕಾಶನ: ಅನನ್ಯ ಪ್ರಕಾಶನ, ಪ್ರಕಟಣೆ: 2008

೩೭) ದಿ. ಕೊಡಗಿನ ಗೌರಮ್ಮ, ಕೊಡಗಿನ ಗೌರಮ್ಮನ ಸಮಗ್ರ ಸಣ್ಣ ಕಥೆಗಳು, ಪ್ರ. ಅನನ್ಯ ಪ್ರಕಾಶನ, ಮೈಸೂರು–1948 ಆಹುತಿ – ಪುಟ–140

೩೮) ದಿ. ಕೊಡಗಿನ ಗೌರಮ್ಮ, ಕೊಡಗಿನ ಗೌರಮ್ಮನ ಸಮಗ್ರ ಸಣ್ಣ ಕಥೆಗಳು, ಪ್ರ. ಅನನ್ಯ ಪ್ರಕಾಶನ, ಮೈಸೂರು–1948, ಆಹುತಿ – ಪುಟ–141

೩೯) ಜೀವನ ಪ್ರೀತಿ : ಡಾ|| ಕಾಳೇಗೌಡ ನಾಗವಾರ : ಪುಟ : 238

೪೦) ದಿ. ಕೊಡಗಿನ ಗೌರಮ್ಮ, ಕೊಡಗಿನ ಗೌರಮ್ಮನ ಸಮಗ್ರ ಸಣ್ಣ ಕಥೆಗಳು, ಪ್ರ. ಅನನ್ಯ ಪ್ರಕಾಶನ, ಮೈಸೂರು–1948, ಹೆಗ್ಗಡತಿ : ಪುಟ – 442

೪೧) ಡಾ|| ಬಸವರಾಜು ಕಲ್ಲುಡಿ (ಸ), ಸುವರ್ಣ ವಿಚಾರ ಸಾಹಿತ್ಯ, ಪ್ರ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂ–2008

೪೨) ಡಾ|| ಸಿದ್ದಲಿಂಗಯ್ಯ: ಜಾತಿಗಳ ಹುಟ್ಟು ಮತ್ತು ಬೆಳವಣಿಗೆ, ಪುಟ–102.

೪೩) ದಿ. ಕೊಡಗಿನ ಗೌರಮ್ಮ : ಸಮಗ್ರ ಕತೆಗಳು : ಪುಟ–28

೪೪) ಜೀವನ ಪ್ರೀತಿ – ಡಾ|| ಕಾಳೇಗೌಡ ನಾಗವಾರ, ಪುಟ : 242

೪೫) ಬರಗೂರು ರಾಮಚಂದ್ರಪ್ಪ : ಸಂಸ್ಕೃತಿ, ಶ್ರಮ ಮತ್ತು ಸೃಜನಶೀಲತೆ, ಪುಟ:484

೪೬) ಶಾರದಾ ಮಳ್ಳೂರಾ (ಸ) ಕೊಡಗಿನ ಗೌರಮ್ಮ ಮತ್ತು ತ್ರಿವೇಣಿ ಅವರ ಸಾಹಿತ್ಯ ಅವಲೋಕನ, ಪುಟ : 45

೪೭) ದಿ. ಕೊಡಗಿನ ಗೌರಮ್ಮ, ಕೊಡಗಿನ ಗೌರಮ್ಮನ ಸಮಗ್ರ ಸಣ್ಣ ಕಥೆಗಳು, ಪ್ರ. ಅನನ್ಯ ಪ್ರಕಾಶನ, ಮೈಸೂರು–1948, ಮುನ್ನಾದಿನ ಕತೆ,:: ಪುಟ–208

# ಅಧ್ಯಾಯ – 6

## ಸಮಾರೋಪ

"ಕೊಡಗಿನ ಗೌರಮ್ಮನವರ ಕಥೆಗಳಲ್ಲಿ ಕುಟುಂಬದ ಪರಿಕಲ್ಪನೆ"ಯ ಎಂಬ ಶೀರ್ಷಿಕೆಯಡಿ ನಾನು ಅಧ್ಯಯನವನ್ನು ಕೈಗೊಂಡಿದ್ದು, ಇದರಲ್ಲಿ ಗಮನಿಸಿದ ಒಟ್ಟು ಅಂಶಗಳು ಈ ರೀತಿ ಇದೆ.

✓ ಗೌರಮ್ಮನವರು ಬರೆದಿರುವ ಒಟ್ಟು 21 ಕತೆಗಳನ್ನು ಅವುಗಳಲ್ಲಿರುವ ಕಥಾವಸ್ತುಗಳ ಹಿನ್ನೆಲೆಯಲ್ಲಿ ಮುಖ್ಯ ಮೂರು ವರ್ಗಗಳಾಗಿ ವಿಂಗಡಿಸಬಹುದು.

(1) ಬಾಲ್ಯವಿವಾಹ, ವಿಧವಾ ಸಮಸ್ಯೆ, ವಿಧವಾವಿವಾಹದ ಸುತ್ತ ಹೆಣೆದಿರುವ ಕತೆಗಳು

(2) ಪ್ರೀತಿ, ಪ್ರಣಯ ಕೇಂದ್ರಿತ ಸಂಭ್ರಮ ಮತ್ತು ವಿಷಾದದ ಕತೆಗಳು.

(3) ವರದಕ್ಷಿಣೆ ಸಮಸ್ಯೆ–ವಿದೇಶಿ ಶಿಕ್ಷಣ ವ್ಯಾಮೋಹಕ್ಕೆ ಸಂಬಂಧಿಸಿದ ಕತೆಗಳು.

✓ ವಸ್ತುವಿನ ಆಯ್ಕೆಯ ದೃಷ್ಟಿಯಿಂದ ಗಮನಸೆಳೆಯುವ ಮತ್ತೊಬ್ಬ ಕಥೆಗಾರ್ತಿ ಗೌರಮ್ಮ ಗ್ರಾಮೀಣ ಬದುಕಿನ ಹಾಗೂ ಐತಿಹ್ಯ ಆಧಾರಿತ ರಚನೆಗಳಲ್ಲಿ ಇವರು ವಿಶೇಷವಾಗಿ ಗಮನ ಸೆಳೆಯುತ್ತಾರೆ. ಗ್ರಾಮೀಣ ಬದುಕಿನ ಮುಗ್ಧತೆಯ ಆವರಣ, ಸಾಮಾಜಿಕ ಸ್ವರೂಪದ ಬಿಂಬ ಇವರ ಕಥೆಗಳಲ್ಲಿ ಒಡಮೂಡಿದೆ. ಹೆಣ್ಣಿನ ಬಾಳು, ಆಕೆಯ ತಾಪತ್ರಯಗಳು ಇವರ ಕಥೆಗಳಲ್ಲಿ ಚಿತ್ರಣಗೊಂಡಿದೆ. ಈ ಕತೆಗಳಲ್ಲಿನ ನವಿರು, ಸರಸ, ವಿನೋದ, ತೀವ್ರವಾದ, ಸಹಾನುಭೂತಿಗಳು ಆಕರ್ಷಿಸುತ್ತವೆ. ಗೌರಮ್ಮ ಕೌಟುಂಬಿಕ ಪ್ರೇಮದ ಕತೆಗಳಿಗೆ ಹೆಸರಾದವರು. ಇವರ ಬಹುಪಾಲು ಕತೆಗಳ ಚೌಕಟ್ಟು ಕುಟುಂಬ ಪರಿಸರ, ಮಧ್ಯಮವರ್ಗದ ಕುಟುಂಬದ ಸುಖ–ದುಃಖಗಳ ಹಾಗೂ ದಾಂಪತ್ಯ ಪ್ರೇಮ ಸಲ್ಲಾಪಗಳನ್ನು

ಇವರ ಕತೆಗಳು ಚೆನ್ನಾಗಿ ಬಿಂಬಿಸುತ್ತವೆ. ಇದನ್ನು ಪ್ರಸ್ತುತ ಲೇಖಕಿಯ ಕತೆಗಳಲ್ಲಿ ಗುರುತಿಸುವ ಮತ್ತು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಿರುತ್ತೇನೆ.

✓ ಯಾವುದೇ ಕೃತಿಯ ನಿರ್ಮಾಣದ ಹಿಂದೆ ಒಂದು ಕಾರಣ ಇದ್ದೇ ಇರುತ್ತದೆ. ಇದರಿಂದಾಗಿಯೇ ಅದರಲ್ಲಿನ ವಸ್ತುವು ನಿರ್ಮಿಸಲ್ಪಟ್ಟಿರುತ್ತದೆ. ಪ್ರಸ್ತುತವಾಗಿ ಈ ಅಧ್ಯಯನದಲ್ಲಿ ಕುಟುಂಬದ ಪರಿಕಲ್ಪನೆ ಎಂಬ ಅಧ್ಯಯನ ಈ ನಾಡಿನಲ್ಲಿರುವ ಭಿನ್ನ ಸಾಮಾಜಿಕ ಸಂದರ್ಭಗಳನ್ನು ಅದಕ್ಕೆ ಕಾರಣವಾಗಿರುವ ಜಾತಿ ವ್ಯವಸ್ಥೆ, ವರ್ಗ ಸಂಘರ್ಷ, ಗಂಡು ಹೆಣ್ಣಿನ ಸಂಬಂಧವನ್ನು ವಿವರಿಸುವ ಪ್ರಯತ್ನ ಮಾಡಿದ್ದೇವೆ. "ಪುನರ್ ವಿವಾಹ" ಹೆಸರೇ ಸೂಚಿಸುವಂತೆ ಮರುಮದುವೆಯನ್ನು ಕುರಿತ ಕತೆ. ಕಥಾನಾಯಕ ವಿಧುರ ಒತ್ತಾಯಕ್ಕೆ ಮಣಿದು ಮರುಮದುವೆಗೆ ಸಿದ್ದನಾಗುತ್ತಾನೆ. 'ಆಹುತಿ' ಬಡತನ, ಮಹತ್ವಾಕಾಂಕ್ಷೆ, ಆದರ್ಶ, ಡಿಗ್ರಿಗಳು ಹೇಗೆ ಬದುಕನ್ನು ಸುತ್ತುವರಿದು, ಮನುಷ್ಯನನ್ನು ಮಾರಾಟ ಮಾಡುತ್ತೇವೆ ಎನ್ನುವ ಚಿತ್ರಣ ಇಲ್ಲಿ ನೈಜವಾಗಿ ಮೂಡಿದೆ. ಈ ಕತೆಯ ನಿರುದ್ಯೋಗದಿಂದ ಯುವಕರ ಆದರ್ಶಗಳು, ಬಯಕೆಗಳು ಬಲಿಯಾಗುವ ರೀತಿಯನ್ನು ಇಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ.

✓ ನಮ್ಮ ಡಿಗ್ರಿಗಳು ಮಾನವೀಯತೆಯನ್ನು ಮರೆತು ಅನೇಕ ಅನಾಹುತಗಳಿಗೆ ಕಾರಣವಾಗುತ್ತವೆ ಎಂಬ ಪ್ರಯತ್ನ ಮಾಡಿದ್ದೇನೆ. ಅದೃಷ್ಟದ ಆಟ; 'ನನ್ನ ಮದುವೆ' ಕತೆಗಳು ಪ್ರೀತಿ, ಪ್ರೇಮ ಸಮಾಜದ ಕಪಿಮುಷ್ಠಿಯಲ್ಲಿ ಸಿಲುಕಿದ ಗಂಡು ಹೆಣ್ಣುಗಳ ಭಾವನೆ ಅಸಹಾಯಕತೆಗಳನ್ನು ಪ್ರಕಟಿಸುತ್ತವೆ. ಕೆಲವು ಕಾಗದಗಳು ಕತೆಯಲ್ಲಿ ಕತೆಗಾರ್ತಿ ಗಂಡು-ಹೆಣ್ಣಿನಲ್ಲಿ ಕಾಮಮೂಲವಾದ ಆಕರ್ಷಣೆಯೊಂದೇ ಇರಬೇಕೆಂದಿಲ್ಲ. ಇರುವುದಿಲ್ಲ, ಅದು ಶುದ್ಧ, ನಿಷ್ಕಾಮ ಪ್ರೇಮ ಆಗಿರಬಲ್ಲದು ಎಂಬುದನ್ನು ಹೇಳಲೆತ್ನಿಸಿದ್ದಾರೆ. ಗಂಡು ಹೆಣ್ಣಿನ ಒಪ್ಪಿಗೆ ಇಲ್ಲದೆ ಆದ ಮದುವೆ ಮದುವೆಯೇ ಅಲ್ಲ ಎಂದು ನಂಬಿದ ರೋಹಿಣಿಯ ಕತೆಯೇ "ಒಂದು ಚಿತ್ರ" ರೋಹಿಣಿ ಮದುವೆಯಾದರೂ ಅವಳ ಪತಿಯನ್ನು ನೋಡಿರಲಿಲ್ಲ. ಚಂದ್ರ ಎಂಬುವನನ್ನು ಮೋಹಿಸಿದ ಅವಳಿಗೆ ಕೊನೆಯಲ್ಲಿ ಆತನೇ ತನ್ನ ಕೈಹಿಡಿದ ಪತಿ ಎಂದು ತಿಳಿದು ಕತೆ ಸುಖಾಂತವಾಗುತ್ತದೆ. ಈ ಕತೆ ಕೊಂಚ ಅಸಹಜ ಘಟನೆಗಳಿಂದ ಕೂಡಿರುವುದರಿಂದ ವಾಸ್ತವತೆಯಿಂದ ದೂರಾಗಿದೆ ಎನಿಸುತ್ತದೆ.

✓ "ಪಾಪನ ಮದುವೆ" ಕತೆ ಮದುವೆಯ ಸಮಸ್ಯೆಯ ಮತ್ತೊಂದು ಮಗ್ಗುಲನ್ನು ಮಧ್ಯಮ ವರ್ಗದ ವಿದ್ಯಾವಂತ ಯುವಕರಿಗಿರುವ ಭ್ರಮೆ, ಆದರ್ಶ, ಬಯಕೆಗಳು ನೋಟವನ್ನು ಒಳಗೊಂಡ ಕಲಾತ್ಮಕ ನಿರೂಪಣೆಯಾಗಿದೆ. ಹೆಜ್ಜೆ ಹೆಜ್ಜೆಗೆ ಕುತೂಹಲ ಕೆರಳಿಸುತ್ತಾ, ಸಾಗುವ

ಹಾಸ್ಯಭರಿತ ಕತೆ 'ಮರದ ಬೊಂಬೆ' ಕಟ್ಟಿಗೆ ಗೊಂಬೆಯಂತಿರುವ ಕೃಷ್ಣಮೂರ್ತಿಯನ್ನು ಬಂದು ಹೆಣ್ಣಿನ ಧೈರ್ಯ, ಸಾಹಸ, ಯುಕ್ತಿಗಳಿಂದ ಮದುವೆಯಾಗಿ ಅವನಿಗೆ ಮನುಷ್ಯ ಚಟುವಟಿಕೆಗಳನ್ನು ವ್ಯವಹಾರವನ್ನು ಕಲಿಸುತ್ತಾಳೆ. ಎಂಬುದನ್ನು ಚಿತ್ರತ ಪ್ರಯತ್ನ ಮಾಡಿದ್ದೇನೆ. ಮುನ್ನಾದಿನ ಧರ್ಮಗಳಿಗೆ ಯಾವುದೇ ನಂಬಿಕೆಯಿದ್ದಲ್ಲೆ ತನಗೆ ಬೇಕಾದ ಧರ್ಮವನ್ನು ಸ್ವೀಕರಿಸುವ ಆಧುನಿಕ ಪ್ರಪಂಚದಲ್ಲಿ ಜನರು ಧರ್ಮದ ಮೇಲೆ ನಡೆಯುತ್ತಿದ್ದಾರೆ ಎಂಬುದನ್ನು ಕಟ್ಟಿಕೊಡುತ್ತದೆ. "ಪಾಪನ ಮದುವೆ", "ಮರದ ಗೊಂಬೆ", **'ಕೊನೆಯ-ಕಾಡನ'** ಕತೆ ಇವು ಮೂರು ಕತಾ ಕೌಶಲ್ಯದ ಕುರುಹುಗಳಾಗಿ ಉಳಿಯಬಲ್ಲವು.

ಕಥಾ ಪಾತ್ರಗಳ ಅಭಿಪ್ರಾಯದಲ್ಲಿ ಸತ್ಯವಿದೆ. ಮೇಲಿನ ಕತೆಗಳಲ್ಲಿ ಆಯ್ದುಕೊಂಡ ವಸ್ತು ಕಲಾತ್ಮಕವಾಗಿ ಮೂಡಿದೆ ಎಂದಲ್ಲ; ಕತೆಗಾರ್ತಿಯ ಸಾಹಿತ್ಯ ನಿರ್ಮಾಣವು ಸಾಮಾಜಿಕ ಪರಿಸರದ ಹಿನ್ನೆಲೆಯಲ್ಲಿಯೇ ರೂಪುತಾಳಿದ್ದರಿಂದ ಅವರ ಸಾಹಿತ್ಯದ ನೆಲೆಬೆಲೆಗಳನ್ನು ಗುರುತಿಸಬೇಕಾಗುತ್ತದೆ. ಗೌರಮ್ಮನವರು ಆರಿಸಿಕೊಂಡಿರುವ ಸಂಗತಿಗಳು ಇಂದಿಗೂ ಪ್ರಸ್ತುತವೆನಿಸುತ್ತದೆ ಎಂಬ ಅಭಿಪ್ರಾಯಕ್ಕೆ ಬರಬಹುದು.

ಕುಟುಂಬದಲ್ಲಿ ಏರ್ಪಡುವ ಭಾವನಾತ್ಮಕ ಸಂಗತಿಗಳು ಹೆಚ್ಚು ಅರ್ಥಗರ್ಭಿತವಾಗಿ ಮೂಡಿಬಂದಿರುವುದನ್ನು ಕಾಣಬಹುದು. ಕುಟುಂಬದಲ್ಲಿ ಭಾವನೆ ಮತ್ತು ಮನಸ್ಸಿನ ಆಲೋಚನೆಗಳು ಸಾಮಾನ್ಯವಾಗಿ ಒಂದಾಗಿರುತ್ತವೆ. ಆದರೆ ಕೊನೆಗೆ ಭಾವನೆಗಳೇ ಮೇಲುಗೈ ಸಾಧಿಸುತ್ತವೆ. ಎಷ್ಟೋ ಬಾರಿ ಕುಟುಂಬದ ಸದಸ್ಯರು ಭಾವನೆಗಳ ಆವೇಶಕ್ಕೆ ಒಳಗಾಗಿ ಸಾಮಾಜಿಕ ಜೀವನದಲ್ಲಿ ಏನನ್ನೂ ಸಾಧಿಸಲಾಗದೇ ಉಳಿಯಬಹುದು. ಭಾವನಾತ್ಮಕ ಆಪತ್ತುಗಳು ಸಮಾಜಕ್ಕೊಂದು ಪಾಠ ಕಲಿಸುವಂತಾದರೆ ಅವುಗಳನ್ನು ಕತೆಗಳಲ್ಲಿ ದಾಖಲಿಸುವುದು ತಪ್ಪಾಗಿ ಕಾಣಿಸುವುದಿಲ್ಲ. ಕೊಡಗಿನ ಗೌರಮ್ಮನವರ ಕತೆಗಳಲ್ಲಿ ಇಂತಹ ಅಂಶಗಳನ್ನು ಗುರುತಿಸಬಹುದು.

# ಅನುಬಂಧ- I

Mercara.

16-8-1929.

ರಾಮಮೂರ್ತಿ-

ಅದೇಕೆ? ನೀನು ಈಗ ನನಗೆ ಕಾಗದವನ್ನು ಬರೆಯುವುದಿಲ್ಲವೇಕೆ? ಬಹುಶಃ ಉದಾಸೀನವಾಗಿರಬಹುದಲ್ಲವೆ?? ಚಿಂತೆಯಿಲ್ಲ. ನಾನು ಬರೆಯುವೆನು. ಆದರೆ ಬರೆಯಲೇನನ್ನು? ಗೋಪಾಲಅಣ್ಣಯ್ಯನ ವಿವಾಹವೃತ್ತಾಂತವನ್ನು ಬರೆಯಲೇ? ಇನ್ನೇನೂ ವಿಶೇಷವಿಲ್ಲದುದರಿಂದ ಬರೆಯುವೆನು ಅದನ್ನೇ.

\+ + + + + + + + + + + + + + + + + + + + + + + + + + +

ಪಾಳ್ಯದೂರ್ದ ಬರೆಗಳ ಮಧ್ಯದಲ್ಲಿ ಒಂದು ಸಾಧಾರಣತರದ ಹುಲ್ಲಿಯ ನಮೂನೆಯ ಮುರುಡಿಯ ಮನೆ. ಮನೆಯ ಇದಿರಿನ ಅಂಗಳಕ್ಕೆ ಮುಚ್ಚಿ ಬಂದುಕೊಂಡು. ಮನೆಯ ಬಲಭಾಗದಲ್ಲಿ ದನಗಳ ಕೊಟ್ಟಿಗೆ. ಎಡಗಡೆಯಲ್ಲಿ ಬಚ್ಚಲು.

ಬಚ್ಚಲಿನಲ್ಲಿಯೂ ತೋಟದಲ್ಲಿಯೂ ಆಗುತ್ತಿದ್ದ ಗಲಭೆಯು ವರ್ಣನಾತೀತವಾಗಿದ್ದಿತು. ಬಚ್ಚಲಿನ ಮೇಲೆಲ್ಲಾ ಹೊಗೆ. ಕೆಳಗೆಲ್ಲಾ ನೀರು. ತೋಟದಲ್ಲಿ ಪಾತ್ರೆಗಳನ್ನು ಅಲ್ಲಲ್ಲಿ ತೊಳೆಯುತ್ತಿರುವುದು, ಸೀರೆಗಳನ್ನು ಒಗೆಯುತ್ತಿರುವುದು ಬಚ್ಚಿಬ್ಬರ ಜಾರುವಿಕೆ, ಬಾವಿಯಿಂದ ನೀರು ಸೇದುವ ಕೊಳಗು, ಬಟ್ಟೆಗಳನ್ನು ಒಂದು ಪಂಕ್ತಿ- ಕೆಡಾಯದಕ್ಕೆಗೆ ಹಾಳೆಗಳಿಂದ ಬಿಂದಿಯನ್ನು ಹೊತ್ತಿರುವ ಪಂಕ್ತಿ ಇವೆಲ್ಲವನ್ನೂ ನೋಡಿದರೆ ಮದುವೆಯ ಮನೆಯ ವಿಜೃಂಭಣೆಯು ವ್ಯಕ್ತವಾಗುತ್ತಿದ್ದಿತು.

# ಅನುಬಂಧ- III

೩೬೦೦

भाई, नमस्ते — आपकी चिट्ठी कुछ दिन हुए
आई थी। मुझे शोक है, मैं उसका उत्तर अब तक
न दे सकी। इस विलंब के लिये आप मुझे क्षमा
करना।

अपनी पिछले पत्र में आप हँसने के लिये
एक अच्छा मौका पाये थे। अब की बार विश्वप्रयत्न
करती हूँ कि आप वैसा अवसर न पावें।

उस पत्र में मैंने लिखी थी कि पिछले
पत्र का उत्तर लिखकर भेजूँगी। परंतु अब
ऐसा करने की साहस न होती है क्योंकि मेरे
पिछले पत्र की अवस्था देखकर अब उसका
उत्तर लिखने की साहस न होती है। जब
मैं एक खत भी न साफ साफ लिख
सकती हूँ तब कैसे उसका उत्तर लिखूँ?
मुझको अपनी टूटी फूटी हिन्दी में उसका
उत्तर लिखकर हिन्दी की अपमान
और आपको हँसने के वास्ते मौका
देने की इच्छा नहीं है।

इसलिये मैंने आज से हिन्दी अध्य
यन जोर से करने की प्रतिज्ञा

# ಅನುಬಂಧ– IV

1.

SUNTICOPPA.
COORG.

Dated 17th Dec. 1938.

[illegible]

To

The Editor,
'Jayakarnataka'
Dharwar.

Sir,

It surprises me greatly to read in the Prajamata weekly of 4th Dec 38, a sketch under the title '[illegible]' stated to have been written by one Mr. B.G. Noolvi. This writing I may recall to your kind recollection is the exact copy of my short story contributed to your issue of May 1932 under the caption '[illegible] [illegible].'

I have compared very closely the two productions & it shocks me to find that the story has been copied word by word with sligut alterations in arrangements title & names of characters etc.

The conception & the execution of the story is completely my own.

# ಅನುಬಂಧ- V

Mrs. B. T. G. Krishna
Hardoor Coffee Estate
Sunticoppa, Coorg.

Mrs B. T. G. Krishna
Sunticoppa.
Coorg.

Gowramma B. Gopalakrishna

Gowramma B. Gopalakrishna

**ಕೊನೆ ಟಿಪ್ಪಣಿ:**

I. *ಕೊಡಗಿನ ಗೌರಮ್ಮ, ಹೆಚ್.ನಾಗವೇಣಿ, ಪ್ರ: ಸಾಹಿತ್ಯ ಅಕಾಡೆಮಿ, ವರ್ಷ: 2012, ಪುಟ ಸಂ: 84*

II. *ಅದೇ ಪುಟ ಸಂ: 85*

III. *ಅದೇ ಪುಟ ಸಂ: 88*

IV. *ಅದೇ ಪುಟ ಸಂ: 89*

V. *ಅದೇ ಪುಟ ಸಂ: 93*

# ಪರಾಮರ್ಶನ ಗ್ರಂಥಗಳು


1) ರಹಮತ್ ತರೀಕೆರೆ : ಚಿಂತನೆಯ ಪಾಡು, ಅಂಕಿತ ಪುಸ್ತಕ-2002
ಸಾಂಸ್ಕೃತಿಕ ಅಧ್ಯಯನ,
ಪ್ರ: ಕರ್ನಾಟಕ ಸಾಹಿತ್ಯ ಅಕಾಡೆಮಿ – 2004

3) ಡಾ॥ ಎಂ.ಉಷಾ : ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು,
ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ, ಹಂಪಿ-2004

4) ವಿಜಯ ಪೂರ್ಣಚ್ಚ ತಂಬಂಡ : ಕೆಳವರ್ಗದ ಪ್ರತಿಭಟನೆ ಸಬಾಲ್ಟರ್ನ್ ಚರಿತ್ರೆ,
ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ, ಹಂಪಿ-2009

5) ಡಾ॥ ಗೀತಾ ಶೆಣೈ : ಕತೆಯಾದಳು ಹುಡುಗಿ (ಕನ್ನಡ ಕಥನ ಸಾಹಿತ್ಯ ಮತ್ತು ಸ್ತ್ರೀ ನಿರ್ವಚನ) 2004.
ಪ್ರ: ಕಾರ್ತಿಕ್ ಎಂಟರ್ ಪ್ರೈಸಸ್-2012

6) ಚಿ.ನ.ಮಂಗಳಾ : ಎಚ್ಚೆತ್ತ ಹಾದಿಯಲ್ಲಿ ಮಹಿಳೆ
ಪ್ರಸಾರಾಂಗ: ಬೆಂಗಳೂರು ವಿಶ್ವವಿದ್ಯಾಲಯ – 2001

7) ಪ್ರೊ.ಕೇಶವ ಶರ್ಮ : ಸ್ತ್ರೀವಾದಿ ಚಿಂತನೆಗಳು – 2010

8) ಎಂ.ಚಂದ್ರಪೂಜಾರಿ
ನಿತ್ಯ ನಂದ ಬಿ.ಶೆಟ್ಟಿ : ಕರಾವಳಿ ಕರ್ನಾಟಕದ ಕೋಮು ವಾದ,
ಪ್ರಸಾರಾಂಗ : ಕನ್ನಡ ವಿ.ವಿ. ಹಂಪಿ-2008

9) ನೇಮಿಚಂದ್ರ : ಮಹಿಳಾ ಅಧ್ಯಯನ –
ಅಂಕಿತ ಪುಸ್ತಕ ಪ್ರಕಾಶನ – 2001

10) ಶಾರದಾ ಮುಳ್ಳೂರ (ಸ) : ಕೊಡಗಿನ ಗೌರಮ್ಮ ಮತ್ತು ತ್ರಿವೇಣಿ ಅವರ ಸಾಹಿತ್ಯ ಅವಲೋಕನ
ಪ್ರಸಾರಾಂಗ: ಕರ್ನಾಟಕ ಸಾಹಿತ್ಯ ಅಕಾಡೆಮಿ-2001

12) ದಿ. ಕೊಡಗಿನ ಗೌರಮ್ಮ : ಕೊಡಗಿನ ಗೌರಮ್ಮನವರ ಸಮಗ್ರ ಸಣ್ಣ ಕಥೆಗಳು
ಪ್ರ: ಅನನ್ಯ ಪ್ರಕಾಶನ, ಮೈಸೂರು-1948

13) ಹೆಚ್.ನಾಗವೇಣಿ : ಭಾರತೀಯ ಸಾಹಿತ್ಯ ನಿರ್ಮಾಪಕರು
ಕೊಡಗಿನ ಗೌರಮ್ಮ,
ಸಾಹಿತ್ಯ ಅಕಾಡೆಮಿ, ಮೊ.ಮುದ್ರಣ: 2012

14)ಡಾ॥ ಕಾಳೇಗೌಡ ನಾಗವಾರ(ಸಂ) : ಜೀವನ ಪ್ರೀತಿ: ಕೊಡಗಿನ ಗೌರಮ್ಮ ಬರೆದ ಸಮಗ್ರ ಕಥೆಗಳು
ಪ್ರ : ಕನ್ನಡ ಪುಸ್ತಕ ಪ್ರಾಧಿಕಾರ - 2012

15) ರಹಮತ್ ತರೀಕೆರೆ : ಪ್ರತಿ ಸಂಸ್ಕೃತಿ :
ಪ್ರ : ಧರಣಿ ಪ್ರಿಂಟರ್ಸ್, ಬೆಂಗಳೂರು - 2011

16) ಡಾ॥ ಬಸವರಾಜು ಕಲ್ಲುಡಿ (ಸ) : **ಸುವರ್ಣ ವಿಚಾರ ಸಾಹಿತ್ಯ**
ಪ್ರ : ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು–2008

17) ಓ.ಎಲ್.ನಾಗಭೂಷಣಸ್ವಾಮಿ : ವಿಮರ್ಶೆಯ ಪರಿಭಾಷೆ
ಲಕ್ಷ್ಮಿ ಮುದ್ರಣಾಲಯ – 2012

18) ಶ್ರೀ ಆರ್ಯಾಂಭ ಪಟ್ಟಾಭಿ (ಪ್ರಧಾನ ಸಂಪಾದಕರು) : ಮಹಿಳಾ ಸಾಹಿತ್ಯ ಸಮೀಕ್ಷೆ
ಪ್ರ : ಸಂವಹನ – 2008

19) ಬರಗೂರು ರಾಮಚಂದ್ರಪ್ಪ : ಸಂಸ್ಕೃತಿ, ಶ್ರಮ ಮತ್ತು ಸೃಜನಶೀಲತೆ
ಪ್ರಥಮ ಮುದ್ರಣ : 2001

20) ತೇಜಸ್ವಿನಿ ನಿರಂಜನ ಸೀಮಂತಿನಿ ನಿರಂಜನ : ಸ್ತ್ರೀವಾದಿ ಸಾಹಿತ್ಯ ವಿಮರ್ಶೆ
ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು

21) ವಿಜಯ ದಬ್ಬೆ : ಮಹಿಳೆ ಸಾಹಿತ್ಯ ಸಮಾಜ
ಪ್ರ : ರಚನಾ ಪ್ರಕಾಶನ, ಮೈಸೂರು

22) ಎಚ್.ಎಸ್.ಶ್ರೀಮತಿ : ಸಿಮಾನ್‌ದ ಬೊವಾ ಸೆಕೆಂಡ್ ಸೆಕ್ಸ್ ಅಧ್ಯಯನ ಮಂಡಲ, ಬೆಂಗಳೂರು–2002

23) ಸುಮಿತ್ರಾಬಾಯಿ. ಬಿ.ಎಸ್. : ಸ್ತ್ರೀವಾದ
ಪ್ರ : ಕರ್ನಾಟಕ ಸಾಹಿತ್ಯ ಅಕಾಡೆಮಿ– 2008

24) ವಿವಿಧ ಲೇಖಕರು : ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕರ್ನಾಟಕ ಸಾಹಿತ್ಯ ಅಕಾಡೆಮಿ – 2008

25) ಅಗ್ರಹಾರ ಕೃಷ್ಣಮೂರ್ತಿ (ಸಂ) : ಸಂಸ್ಕೃತಿ ಕಥನ,
ಪ್ರ : ಕನ್ನಡ ಪುಸ್ತಕ ಪ್ರಾಧಿಕಾರ

26) ಎಚ್.ಎಸ್. ಶ್ರೀಮತಿ (ಸಂ) : ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ

27) ಕವಿತಾ ರೈ. ಬಿ.ಆರ್ : ಮಹಿಳೆ ಅಸ್ತಿತ್ವದ ಸಂಕಥನ – ಬಿಂದು ಪರಿಕಲ್ಪನಾತ್ಮಕ ಅಧ್ಯಯನ
ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು

28) ಎಚ್.ಎಸ್.ಶ್ರೀಮತಿ : ಸ್ತ್ರೀವಾದಿ ಸಂಶೋಧನೆ ವಿಧಿ ವಿಧಾನಗಳು
ಪ್ರ : ಪ್ರಗತಿ ಗ್ರಾಫಿಕ್ಸ್ – 2012

29) ಆಶಾದೇವಿ : ಸ್ತ್ರೀಮತವನುತ್ತರಿಸಲಾಗಿದೆ ?
ಪ್ರ : ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ – 2005

30) ಹಳೆಮನೆ ರಾಜಶೇಖರ : ಮಹಿಳೆ ಮತ್ತು ಸಂಸ್ಕೃತಿ
ಪ್ರ : ಸ್ನೇಹ ಪ್ರಿಂಟರ್ಸ್ – 2008

31) ಡಾ॥ ರಾಘವ್ (ಸಂ) : ಮಹಿಳಾ ಅಧ್ಯಯನ ಆಯಾಮಗಳು
ಪ್ರ : ರೂಪ ಪ್ರಕಾಶಕರು, ಮೈಸೂರು – 2008

32) ಡಾ॥ ಕೆ.ವಿ.ನಾರಾಯಣ : ವಿಚಾರ ಸಾಹಿತ್ಯ (ವಿ)
ಡಾ॥ ಕಾಳೇಗೌಡ ನಾಗವಾರ ಪ್ರಸಾರಾಂಗ : ಬೆಂಗಳೂರು ವಿ.ವಿ. – 2001

33) ಜಿ.ಹನುಮಂತರಾವ್ : ಕುಟುಂಬ ಜೀವನ,
ಪ್ರ : ಮೈಸೂರು ವಿ.ವಿ. – 1980

34) ರಾಮಚಂದ್ರರಾವ್ .ಎಸ್.ಕೆ. : ವಿವಾಹ ಪದ್ಧತಿಗಳು,
ಬೆಂಳೂರು ವಿ.ವಿ.

35) ಪ್ರೊ.ಮರಿದೇವರು. ಸಿ.ಕೆ : ಶಿಕ್ಷಣ ತತ್ವಶಾಸ್ತ್ರ
ಉದಯಭವ್ಯ ಪ್ರಕಾಶನ , ತುಮಕೂರು – 1992

